*Tiruvalluvar* : Kannada translation by P. S. Srinivasa of S. Maharajan's monograph in English, Sahitya Akademi, 1990.

SAHITYA AKADEMI
REVISED PRICE Rs. 15·00



First Published : 1990

ಸಾಹಿತ್ಯ ಅಕಾದೆಮಿ

ರವೀಂದ್ರಭವನ, ೩೫, ಫಿರೋಜಶಾಹ ರಸ್ತೆ, ನವದೆಹಲಿ ೧೧೦ ೦೦೧

'ಸ್ವಾತಿ' ಮಂದಿರ್ ಮಾರ್ಗ್, ನವದೆಹಲಿ–೧೧೦ ೦೦೧

೨೯, ಎಲ್ಡಾಮ್ಸ್ ರಸ್ತೆ, ತೇನಾಂಪೇಟೆ, ಮದ್ರಾಸ್ ೬೦೦ ೦೧೮

ಜೀವನ್‌ತಾರಾ ಭವನ, ಡೈಮಂಡ್ ಹಾರ್ಬರ್, ಕಲಕತ್ತಾ ೭೦೦ ೦೫೩

೧೭೨, ಮುಂಬಯಿ ಮರಾಠಿ ಗ್ರಂಥ ಸಂಗ್ರಹಾಲಯ ಮಾರ್ಗ, ದಾದರ್,
ಮುಂಬಯಿ ೪೦೦ ೦೧೪.

SAHITYA AKADEMI
REVISED PRICE Rs. 15·00

ಚಂದನ ಪ್ರಿಂಟರ್ಸ್, ಬೆಂಗಳೂರು–560 079

# ಒಳತಿರುಳು

# ಪೀಠಿಕೆ

ತಿರುವಳ್ಳುವರ್ ಸುಮಾರು 2000 ವರ್ಷಗಳ ಹಿಂದೆ ಜೀವಿಸಿದ್ದರೂ ಅವರು ಈಗ ಇಲ್ಲ ಎಂದು ಎನ್ನಿಸುವುದಿಲ್ಲ. ಮನುಷ್ಯರ ಭಾವನೆಗಳ ಮೇಲೆ ಪ್ರಭಾವ ಬೀರುತ್ತಲೂ ಅವರ ಮುಂದೆ ತಾನು ಇಟ್ಟಿರುವ ದೊಡ್ಡ ಆದರ್ಶಗಳೊಂದಿಗೆ ಹೆಚ್ಚು ಹೆಚ್ಚಾಗಿ ಅವರ ನಡೆ–ನುಡಿಗಳು ಹೊಂದಿಕೊಳ್ಳುವಂತೆ ಒತ್ತಾಯಿಸುತ್ತಲೂ ತಿರುವಳ್ಳುವರು ತಮಿಳು ನಾಡಿನಲ್ಲಿ ಇಂದೂ ಕಂಡು ಬರುತ್ತಾರೆ.

ಬೇರೆ ಯಾವ ತಮಿಳನೂ ಮಾಡದಿರುವ, ತಮಿಳು ಸಾಹಿತ್ಯವನ್ನು ರೂಪಿಸುವ ಕೆಲಸ, ತಿರುವಳ್ಳುವರಿಂದ ಆಗಿದೆಯೆಂಬುದನ್ನು ಯಾರೂ ನಿರಾಕರಿಸುವುದಿಲ್ಲ. ಅವರು ತಮಿಳು ನಾಡಿನ ಬೌದ್ಧಿಕ ಮತ್ತು ಸಾಹಿತ್ಯಕ ಕ್ಷೇತ್ರದಲ್ಲೆಲ್ಲ ವ್ಯಾಪ್ತರಾಗಿದ್ದಾರೆ. ಅಲ್ಲದೆ ಅವರ ಕಾಲದಿಂದೀಚೆಗೆ ಯಾವ ಮಾನವನೂ ಅವರಿಗೆ ಸರಿಸಮನಾಗಿ ನೈತಿಕ ಮತ್ತು ಆಧ್ಯಾತ್ಮಿಕ ಎತ್ತರಗಳನ್ನು ಮುಟ್ಟಿಲ್ಲ. ಪ್ರಾಯಶಃ ಕಂಬರನ್ನು ಬಿಟ್ಟರೆ ಬೇರೆ ಯಾರೂ ಅವರಿಗಿಂತ ಹಿಂದೆಯಾಗಲೀ ಅನಂತರವಾಗಲೀ ಅವರಿಗೆ ಹೆಗಲೆಣೆಯಾಗಿ ನಿಲ್ಲಲಿಲ್ಲ.

ಅವರು ನಿಶ್ಚಯವಾಗಿ ಮಾನವಕುಲವನ್ನು ಕುರಿತು ತಮಿಳಲ್ಲದೆ ಬೇರೆ ಭಾಷಾ ವರ್ಗದ ಜನರನ್ನೂ ಸೇರಿಸಿಕೊಂಡು-ಚಿಂತಿಸಿದರು. ಪ್ಲೇಟೋ, ಅರಿಸ್ಟಾಟಲ್, ಕನ್ಫ್ಯೂಷಿಯಸ್, ರೂಸೋ ಇವರುಗಳಂತೆಯೇ ತತ್ವಚಿಂತನೆ, ನೇರ್ಮೆ, ನ್ಯಾಯ, ನೀತಿ ನಿಷ್ಠುರತೆಗಳ ಭಾವನೆಯುನ್ನು ಬೋಧಿಸಿದರು. ಮಾನವ ಕುಲವನ್ನು ಕುರಿತು ಅವರು ಏನು ಚಿಂತನೆ ನಡೆಸಿದರು ? ಮಾನವ ಕುಲದ ಬಗ್ಗೆ ಅವರು ಆಲೋಚಿಸಿದ ಚಿಂತನೆಗಳಿಗೆ ಏಕೆ ಮಹತ್ವ ನೀಡಬೇಕು ? ಎಂಬುದು ಮಹತ್ವದ ಪ್ರಶ್ನೆ. ಏಕೆಂದರೆ ನಮ್ಮನ್ನು ಇಂದಿಗೂ ದಾರಿ ತಪ್ಪಿಸುವಂತಿರುವ ಸಾಮಾಜಿಕ ಜೀವನದ ಅಭ್ಯುದಯ ಮತ್ತು ಶಾಂತಿ ಮಂತ್ರವು ಸರಿ ಎಂದು ನಾವು ಒಪ್ಪುವುದಾದರೆ ನಾವೆಲ್ಲ ತಪ್ಪಾದ ದಾರಿಯಲ್ಲಿ ಹೋಗುತ್ತಿದ್ದೇವೆಂಬುದು ಸ್ವವಿದಿತ.

ತಿರುವಳ್ಳುವರ ಮನಸ್ಸು ಅಸಾಮಾನ್ಯವಾದುದು. ಅದಕ್ಕಾಗಿ ನಾವು ಅವರಿಗೆ ಕೃತಜ್ಞರಾಗಿರುವುದು ಮಾತ್ರವಲ್ಲ, ಅವರ ಕಣ್ಣುಗಳ ಮೂಲಕ ಮಾನವ ಕುಲವನ್ನು ನೋಡುವುದೇ ಒಂದು ರೋಮಾಂಚಕ ಅನುಭವ. ಮಾನವ ಸ್ವಭಾವವನ್ನು ಅದರ

ಮರ್ತ್ಯ ಹಾಗೂ ಪಾರಲೌಕಿಕ ಸಂಬಂಧಗಳಲ್ಲಿ ತಮ್ಮ ದಿವ್ಯ ದೃಷ್ಟಿಯಿಂದ ಚಿಂತಿಸುತ್ತ ನಿಸ್ಸಂದೇಹವಾದ ನಂಬಿಕೆಯು ನಿಚ್ಚಳ ಬೆಳಕಿನಲ್ಲಿ ಪರಿಪೂರ್ಣವಾದ ಚಿತ್ರವನ್ನು ಅವರು ಕಲ್ಪಿಸಿಕೊಳ್ಳುತ್ತಾರೆ. ಮನುಷ್ಯನ ವ್ಯಕ್ತಿಗತ ಸಂಬಂಧಗಳಲ್ಲಿ ಅಸಮತೆ ಯುಂಟಾಗಲು ಕಾರಣಗಳೇನೆಂಬುದನ್ನು ಗುರುತಿಸಿ, ವ್ಯಕ್ತಿ ವ್ಯಕ್ತಿಗಳ ಮನಸ್ಸಿನಲ್ಲಿ ಸಮರಸಭಾವನೆ ಏರ್ಪಡಲು ಸಹಾಯಕವಾಗುವ ಒಂದು ಸುದೀರ್ಘ ನೀತಿ ಸಂಹಿತೆ ಯನ್ನು ಅವರು ರೂಪಿಸುತ್ತಾರೆ. ಉದಾಹರಣೆಗೆ ತಂದೆ-ಮಗ, ಗಂಡ-ಹೆಂಡತಿ, ಪ್ರಜೆ-ಅರಸು, ಆತ್ಮ-ಪರಮಾತ್ಮ ಈ ಸಂಬಂಧಗಳ ನಡುವೆ ಮಾನವ ಸ್ವಭಾವದಿಂದ ಏರ್ಪಡುವ ಭಾವುಕ ಘರ್ಷಣೆ, ಪ್ರತಿಕ್ರಿಯೆಗಳ ಮೇಲೆ ಅವರು ತಮ್ಮ ದೃಷ್ಟಿಯನ್ನು ನೆಲೆಗೊಳಿಸುತ್ತಾರೆ.

133 ಅಧ್ಯಾಯಗಳಲ್ಲಿ 1330 ಕುರುಳುಗಳನ್ನೊಳಗೊಂಡ ತಿರುಕ್ಕುರಳಿನ ಶಿಲ್ಪವನ್ನು ನಾವು ಕಲ್ಪಿಸಿಕೊಳ್ಳುವಾಗ ಅದರ ಸಮಗ್ರ ಚಿತ್ರವನ್ನು ನಾವು ಗ್ರಹಿಸು ವಾಗ ಆರ್ನಾಲ್ಡನ ಕವಿಯೊಬ್ಬನ ವರ್ಣನೆಯು ನೆನಪಿಗೆ ಬರುತ್ತದೆ :

ಗೇಟಿನ ಬಾಗಿಲಿಗೊರಗಿ ಎವೆಯಿಕ್ಕದೆ ನೋಡುತ್ತಿದ್ದಾನೆ,
ಕಣ್ಣುಗಳಲಿ ನೀರುಕ್ಕುತಿದೆ, ಕಿವಿಗಳಲಿ
ಸಾವಿರ ವರುಷಗಳ ಗುನುಗುನಿಸುವ ದನಿ,
ಅವನ ಕಣ್ಣಮುಂದೆ,
ಪ್ರಸನ್ನವಾದ, ನಿರಂತರಪೂರ್ಣವಾದ
ಬದುಕು ತೆರೆದುಕೊಳ್ಳುವುದನು
ನೋಡುತ್ತಿದ್ದಾನೆ.

ತಿರುವಳ್ಳುವರು ಜೀವನವು ನಿರಂತರ ಪೂರ್ಣತೆಯಲ್ಲಿ ಬಿಡಿಸಿಕೊಳ್ಳುವುದನ್ನು ಕಾಣುವುದು ಮಾತ್ರವಲ್ಲ, ಮುಂದೆ ಮಾನವ ವಿಕಾಸಕ್ಕೆ, ಇರುವ ಬಾಧಕಗಳೇನು ? ಈ ಬಾಧಕಗಳ ನಿವಾರಣೆ ಹೇಗೆ ಎಂಬುದನ್ನು ದೃಷ್ಟಾರನಾಗಿ ನೋಡುವುದನ್ನೂ ನಾವು ತಿಳಿಯುತ್ತೇವೆ. ಅವರ ಕಣ್ಣಿನಿಂದ ತಪ್ಪಿಸಿಕೊಳ್ಳುವ ವಸ್ತು ಯಾವುದೂ ಇಲ್ಲ. ಹಾಸ್ಯ, ವ್ಯಂಜನ, ವಿಡಂಬನ ಚೇಷ್ಟೆಗಳಿಂದ ಅವರ ಕಣ್ಣುಗಳು ಮಿನುಗು ತ್ತವೆ. ಧಾರ್ಮಿಕ ಋಜುತ್ವದ ಕ್ರೋಧದಿಂದ ಜ್ವಲಿಸುತ್ತವೆ. ನಿರ್ದುಷ್ಟ ಉದಾತ್ತ ವಿವೇಕದಿಂದ ಕಿಡಿಕೆದರುತ್ತವೆ. ಆ ಕಣ್ಣುಗಳು ಪುರುಷನನ್ನು ಚಡಪಡಿಸುವಂತೆ ಮಾಡುತ್ತವೆ, ಹೆಣ್ಣನ್ನು ನಾಚುವಂತೆ ಮಾಡುತ್ತವೆ; ಬಡವರನ್ನು ಕಂಡೊಡನೆ ಕಣ್ಣುಗಳು ಕಣ್ಣೀರಿನಿಂದ ಮಂಜಾಗುತ್ತವೆ, ದುಷ್ಟರನ್ನು ಕಂಡಾಗ ಕುಕ್ಕುತ್ತವೆ.

ತಿರುವಳ್ಳುವರು ಮಾನವೀಯ ಸ್ಥಿತಿಯನ್ನು ಸಮಗ್ರವಾಗಿ ಸ್ವೀಕರಿಸಲು ಪ್ರಯತ್ನಿಸುವುದು ಮಾತ್ರವಲ್ಲದೆ, ತನ್ನ ಜ್ವಲಂತ ಚಿಂತನೆಗಳನ್ನು ಶುದ್ಧವಾದ ಕಾವ್ಯ ಪರಿಪೂರ್ಣತೆಯಲ್ಲಿ ಅಭಿವ್ಯಕ್ತಿಸುವುದು ಕಂಡು ಬರುತ್ತದೆ. ಕೆಲವೇಳೆ ನಾಟಕೀಯ ವಾಗಿಯೂ ಕೆಲವೇಳೆ ಭಾವಗೀತಾತ್ಮಕವಾಗಿಯೂ ತಮ್ಮ ಉನ್ನತ ಭಾವ ಪರಿಣಾಮ ವನ್ನು ಸಾಧಿಸುತ್ತಾರೆ. ಅಸಾಧಾರಣ ಸಂಯಮದಿಂದ ಕಲಾತ್ಮಕ ಚಚ್ಚರದಿಂದ, ಶಬ್ದಗಳಿಗೆ ಅದ್ಭುತ ಅರ್ಥಶಕ್ತಿಯನ್ನು ತುಂಬುತ್ತ, ಆಶ್ಚರ್ಯಕರ ರೀತಿಯಲ್ಲಿ ಹಿತ-ಮಿತವಾದ ಅಡಕವನ್ನು ಸಾಧಿಸುತ್ತ ಯಾವುದೇ ಶಬ್ದವೊಂದನ್ನೂ ಅಳಿಸಲಾಗದ ಸಾಂದ್ರತೆಯನ್ನು ಕಲ್ಪಿಸಿದ ಕುಶಲ ತಂತ್ರಜ್ಞರಂತೆ ಕಾಣುತ್ತಾರೆ. ಅದರಿಂದಲೇ ಅವರ ವ್ಯಾಖ್ಯಾನಕಾರರು ಅವರು ಬಳಸಿದ ಪ್ರತಿ ಶಬ್ದವನ್ನೂ ಅದರಲ್ಲಿರುವ ಅರ್ಥದ ಕೊನೆಯ ಹನಿಯವರೆಗೆ ಹಿಂಡಿ ಹೀರಿ ತೆಗೆಯುವ ಪ್ರಯತ್ನದಲ್ಲಿ ತೊಡಗು ತ್ತಾರೆ. ಮೂಲ ಕುರುಳಿನ ಮೇಲಿನ ಹಿಡಿತವನ್ನು ನೈಪುಣ್ಯವನ್ನು ವ್ಯಾಖ್ಯಾನಕಾರ ಎಷ್ಟರ ಮಟ್ಟಿಗೆ ಸಾಧಿಸಿದ್ದಾನೆಂಬುದರ ಮೇಲೆ ಅವನ ಯಶಸ್ಸು ಅವಲಂಬಿತ ವಾಗುತ್ತದೆ.

ಡಾ॥ ಆಲ್ಬರ್ಟ್ ಷ್ವೈಟ್ಜರ್ ತಮ್ಮ "ಇಂಡಿಯನ್ ಥಾಟ್ ಅಂಡ್ ಇಟ್ಸ್ ಡೆವಲಪ್‌ಮೆಂಟ್" ಗ್ರಂಥದಲ್ಲಿ ತಿರುಕ್ಕುರಳನ್ನು ಕುರಿತು ಮೆಚ್ಚುಗೆಯನ್ನು ವ್ಯಕ್ತ ಪಡಿಸುತ್ತ "ಇಷ್ಟು ಗಂಭೀರವಾದ ವಿವೇಕಯುತ ಸೂತ್ರಗಳ ಸಂಗ್ರಹವನ್ನು ವಿಶ್ವದ ಸಾಹಿತ್ಯರಾಶಿಯಲ್ಲಿ ಕಾಣುವುದು ಅಪರೂಪ" ಎಂದಿದ್ದಾರೆ. ಫ್ರೆಂಚ್ ಭಾಷೆಯ ಮಹಾವಿದ್ವಾಂಸ ಎಂ. ಏರಿಯಲ್‌ಗೆ ಬರೆದ ಪತ್ರದಲ್ಲಿ (ಜರ್ನಲ್ ಆಫ್ ಏಶಿಯಾಟಿಕ್-ನವೆಂಬರ್, 1848) "ಮಾನವ ಚಿಂತನೆಗಳ ಅತ್ಯುಚ್ಚವಾದ ಶುದ್ಧ ಅಭಿವ್ಯಕ್ತಿಯ ತಮಿಳು ಸಾಹಿತ್ಯದ ಮೇರು ಕೃತಿ" - ಎಂದು ತಿರುವಳ್ಳುವರ ಈ ಮಹಾಕೃತಿಯ ಬಗ್ಗೆ ತನ್ನ ಅನಿಸಿಕೆಗಳನ್ನು ಹೇಳಿಕೊಂಡಿದ್ದಾರೆ. ಮತ್ತೆ ಮುಂದು ವರಿದು, "ಮಿಗಿಲಾಗಿ ಕುರುಳಿನಲ್ಲಿರುವ ಅದ್ಭುತವಾದ ಅಂಶಗಳೆಂದರೆ, ಯಾವ ಜಾತಿ-ಜನಾಂಗ ಅಥವಾ ನಂಬಿಕೆಗಳನ್ನು ಗಣಿಸದೆ. ಇಡೀ ಮಾನವಕುಲವನ್ನು ಸಂಬೋಧಿಸಿ ಕವಿ ಹೇಳಿರುವುದು, ಸಾರ್ವಭೌಮ ನೀತಿ ಮತ್ತು ಸಮಗ್ರ ವಿವೇಕ ವನ್ನು ಮಂಡಿಸಿರುವುದು; ಅಲೌಕಿಕ, ಅಮೂರ್ತ ಸ್ವರೂಪದಲ್ಲಿ, ಗುಣ, ಧರ್ಮಗಳಲ್ಲಿ ಸತ್ಯದಲ್ಲಿ ಅವುಗಳ ಸಾರ ಸರ್ವಸ್ವವನ್ನು ಸಾರಿರುವುದು; ಗೃಹ ಜೀವನ ಮತ್ತು ಸಾಮಾಜಿಕ ಜೀವನಗಳ ಉನ್ನತ ನೀತಿಗಳನ್ನು ಒಂದೇ ವರ್ಗವೆಂಬಂತೆ ನಿರೂಪಿಸಿರು ವುದು; ಚಿಂತನೆ, ಭಾಷೆ, ಕಾವ್ಯಗುಣಗಳಲ್ಲಿ ಪರಿಪೂರ್ಣವಾದ ಐಕ್ಯವನ್ನು ಸಾಧಿಸಿರು ವುದು; ದೈವ ಪ್ರಕೃತಿಯ ಮಹಾದ್ಭುತಗಳನ್ನು ಸರಳ ಆಧ್ಯಾತ್ಮಿಕ ಚಿಂತನೆಯ ರೂಪದಲ್ಲಿ ವ್ಯಕ್ತಪಡಿಸಿರುವುದು, ಹೃದಯದ ಅತಿ ಸೂಕ್ಷ್ಮ ಭಾವನೆಗಳನ್ನು ಸರಾಗ ವಾಗಿ, ಪ್ರಸನ್ನ ಚಿತ್ತದಿಂದ ವಿಶ್ಲೇಷಿಸಿರುವುದು". ಎಂದು ತಿಳಿಸಿದ್ದಾರೆ.

ಇಟಲಿಯ ಕ್ರೈಸ್ತ ಮಿಷನರಿ ಫಾದರ್ ಬೆಸ್ಕಿ (ಡಿ 1742) ಯವರು ಬಹು ಪಾಲು ಕುರುಳುಗಳನ್ನು ಲ್ಯಾಟಿನ್ ಭಾಷೆಗೆ ಅನುವಾದಿಸಿದ್ದಾರೆ. ಅವರು ತಮ್ಮ ವ್ಯಾಖ್ಯಾನದಲ್ಲಿ ತಿರುವಳ್ಳುವರ ಕುರುಳುಗಳನ್ನು ಸೆನೆಕ ಅವರ ಸೂತ್ರೋಕ್ತಿ (ಸೂಕ್ತಿ) ಗಳಿಗೆ ಹೋಲಿಸಿದ್ದಾರೆ. ಡಾ|| ಜಿ. ಯು. ಪೋಪ್ ಅವರು, ತಿರುಕ್ಕುರಳನ್ನು ಇಂಗ್ಲಿಷಿಗೆ ಅನುವಾದಿಸಿ 1886 ರಲ್ಲಿ ಅದನ್ನು ಪ್ರಕಟಿಸಿದರು. ಡಾ|| ಪೋಪ್ ತಿರುಕ್ಕುರುಳನ್ನು ಪ್ರಾಪರ್‌ಷಸ್‌ನ, ಮಾರ್ಷಲ್‌ನ ಮತ್ತು ಲ್ಯಾಟಿನ್ ಭಾಷೆಯ ಎಲಿಜಿಯಾಕ್ (ಶೋಕಗೀತೆ) ಪದ್ಯಗಳಿಗೆ ತುಲನೆ ಮಾಡಿದ್ದಾರೆ. ತಮ್ಮ ತಿರುಕ್ಕು-ರಳಿನ ವ್ಯಾಖ್ಯಾನದಲ್ಲಿ, ಹೊರೇಸ್, ಈಸ್ಕಿಲಸ್, ಡಾಂಟೆ, ಷೇಕ್ಸ್‌ಪಿಯರ್, ಬ್ರೌನಿಂಗ್, ವರ್ಡ್ಸ್‌ವರ್ತ್, ಮನು, ಬರ್ಗಿನ್, ಕಾಟಲಸ್ ಸಮಾನ ದೃಷ್ಟಾಂತ ಗಳನ್ನು ಉದಾಹರಿಸಿದ್ದಾರೆ. ಅಲ್ಲದೆ ಆರ್ಕ್‌ಬಿಷಪ್ ಟ್ರೆಂಚ್, ಸಂತ ಆಗಸ್ಟಿನ್ ವಿಷಯದಲ್ಲಿ ಹೇಳಿರುವ ಮಾತುಗಳಿವು-"ಅತಿ ಕಿರಿದರಲ್ಲಿ, ನೆನಪಿಡುವ ಹಾಗೆ, ಹೇರಳ ವಾದ ಅಂಶಗಳನ್ನು ಹಿಡಿದಿಟ್ಟಿದ್ದಾರೆ. ನನ್ನ ಮಾತಲ್ಲಿ ಹೇಳುವುದಾದರೆ, ಒಂದೇ ನುಡಿಗಟ್ಟಿನಲ್ಲಿ ಹೇಳಬಯಸುವ ಪೂರ್ಣ ಸತ್ಯವನ್ನು ಹುದುಗಿಸಿ, ನುಣುಪಾದ ಭರ್ಜಿ ಯಾಗಿ ತೋರುತ್ತ ಒಡನೆಯೇ ಚುಚ್ಚುವ ಮೊನೆಯಾಗಿ ಬಿಡಿಸಿಕೊಳ್ಳುತ್ತ ನಮ್ಮ ಚಿತ್ತದಿಂದ, ನೆನಪಿನಿಂದ ಕಳಚಿಕೊಳ್ಳದಂತೆ ಬಂಧಿಸಿಡುವ ಶಕ್ತಿದುಂಬಿದ ಅಡಕದ ಸೂಚ್ಯ ನುಡಿಗಳಾಗಿ ಮೈತಳೆದಿವೆ".

ತಿರುವಳ್ಳುವರ ಸೋದರಿ ಎಂದು ಪ್ರಸಿದ್ಧಳಾದ ಕವಯಿತ್ರಿ ಅವ್ವೈಯಾರ್, ವಳ್ಳುವರ ಕಾವ್ಯಕರ್ಮವನ್ನು ಆನುಷಂಗಿಕವಾಗಿ ಗಮನಿಸಿದವಳು. ಆಕೆ ತನ್ನ ಹಾಡೊಂದರಲ್ಲಿ ಹೀಗೆ ಹೇಳಿದ್ದಾಳೆ-'ವಳ್ಳುವರು ಅಣುವನ್ನು ಕೊರೆದು ಅದರೊಳಗೆ ಏಳು ಕಡಲನ್ನು ಸುರಿದು ತುಂಬಿಸಿದ್ದಾರೆ. ಆ ಅಣುವನ್ನು ಕತ್ತರಿಸಿ ಭಾಗಶಃ ಕುರುಳಿನ ರೂಪದಲ್ಲಿ ನಮಗಿತ್ತಿದ್ದಾರೆ".

ತಿರುವಳ್ಳುವರು 'ವಿಶ್ವಮಾನವತೆಯನ್ನು ಸಾರುವ ಕವಿ' ಎಂದು ಡಾ || ಜಿ. ಯು. ಪೋಪ್ ಹೇಳಿರುವುದು ಅತ್ಯಂತ ಉಚಿತವಾದ ಮಾತು. ತಿರುವಳ್ಳು ವರ ವಿಶ್ವಮಾನವ ಗುಣವನ್ನು ಸಾರಿ ಹೇಳುವ ಪೋಪ್ ಅವರ ಗೀತೆ ಇದು :

ಹೀನಕುಲ ಸಂಜಾತ ವಳ್ಳುವ ಋಷಿಪುಂಗವ
ಭಾಷೆ ಶಬ್ದಗಳು ನಿನ್ನ ವಿವರಿಸದಿರಬಹುದು
ಸಕಲ ವಸ್ತುಗಳು ಮಾರ್ಪಡಬಹುದು
ನಿನ್ನ ಕೀರ್ತಿಗಳಿವಿಲ್ಲ
ನೀನು ವಿಶ್ವಮಾನವತೆಯ ಕವಿ

ನೀರ ತೆಪ್ಪದಲಿ ತೇಲಿ ಮೇಲೆದ್ದು ಬಂದ ನಿನ್ನ ಕೃತಿ
ಧರ್ಮ, ನಿಜ ಸಂಪದ, ಸಾನಂದಗಳಿಂದೊಡಗೂಡಿ
ಮಾನವನ ಗುರಿಯನು
ಮಧುರತಮ ಮಾರ್ಮಿಕ ದ್ವಿಪದಗಳಲಿ
ಸಾರುತಿಹುದು
ಕಡಲ ತೀರದ ತಾಳೆವನದ ಗರಿಗೆದರಿ ತೀಡುವ
ತಂಗಾಳಿಯ ನಡುವೆ
ಕನಸಿನಲು ಕಾಣಲರಿಯದ ನಿನ್ನ ತೃಪ್ತದೃಷ್ಟಿ
ಕಣ್ಣುಗಳ ಮಿಂಚಿಸುತ್ತಿಹವು
ನಿನ್ನ ಕಲ್ಪಿತ ಸಪ್ತಜನ್ಮಗಳ ಸಾಮ್ರಾಜ್ಯದಾಚೆಯಲಿ
ನಿನ್ನಾಧ್ಯಾತ್ಮಿಕ ಶಕ್ತಿಯ ಜಾಲದಲಿ
ಅಂಧಕಾರದ ಮೋಡಗಳು-ಉರುಳುತ್ತ ಚಲಿಸುತಿವೆ
ಭೂಮಂಡಲವೆಲ್ಲ ಮಾರ್ನುಡಿದೆ ನಿನ್ನ
ಹಾಡಿನ ದುರ್ಬಲ ಎದುರುಲಿಯನು
ದೇಶ ವಿದೇಶಗಳ ಜನರು ಅಚ್ಚರಿಯಿಂದಾಲಿಸಿದರು
ಓ ಸೋದರ ! ಲೋಕದ ಜನರೆಲ್ಲ
ನಿಷ್ಕಳಂಕ-ಆತ್ಮದ ಋಷಿಪುಂಗವನೆಂದು
ನಿನ್ನ ಕೀರ್ತಿಸುತ್ತಿಹರು.



## 2. ತಿರುವಳ್ಳುವರ ಕಾಲ ಮತ್ತು ಬೋಧನೆಗಳು

ತಿರುವಳ್ಳುವರಿಗೆ ಸರ್ವಮಾನ್ಯಗುಣ, ವಿಶ್ವಮಾನ್ಯದೃಷ್ಟಿ, ವಿವೇಕ, ಸ್ಫೂರ್ತಿ ಮತ್ತು ಭಾಷಾಮಾಧ್ಯಮವನ್ನು ಕೊಟ್ಟ ತಮಿಳುನಾಡು ಎಂಥದು! ಅವರು ಕ್ರಿ.ಪೂ. 3 ರಿಂದ ಮೊದಲ ಶತಮಾನದ ನಡುವೆ ಬದುಕಿದ್ದರೆಂದು ನಂಬಲು ಕಾರಣಗಳಿವೆ. ಈ ಅವಧಿಯಲ್ಲಿಯೇ ತಮಿಳು ನಾಡಿನ ಬೇರೆ ಬೇರೆ ಪ್ರದೇಶಗಳನ್ನು ಆಳುತ್ತಿದ್ದ ಚೇರ, ಚೋಳ ಮತ್ತು ಪಾಂಡ್ಯ ಅರಸು ವಂಶಗಳ ರಾಜರುಗಳು ವಿಶಾಲವಾದ ಅಂತರರಾಷ್ಟ್ರೀಯ ಸಂಬಂಧಗಳನ್ನು ಏರ್ಪಡಿಸಿಕೊಂಡಿದ್ದರು. ಪಶ್ಚಿಮದಲ್ಲಿ ಈಜಿಪ್ಟ್, ಗ್ರೀಸ್ ಮತ್ತು ರೋಮ್ ದೇಶಗಳು; ಪೂರ್ವದಲ್ಲಿ ಬರ್ಮಾ, ಮಲೇಶಿಯಾ ಮತ್ತು ಚೈನಾ ದೇಶಗಳು; ದಕ್ಷಿಣದಲ್ಲಿ ಸಿಲೋನ್, ಉತ್ತರದಲ್ಲಿ ಹಿಮಾಲಯದ ರಾಜ್ಯಗಳು ತಮಿಳುನಾಡಿನ ದೊರೆಗಳ ಸಂಪರ್ಕಕ್ಕೆ ಒಳಗಾಗಿದ್ದವು. ಕ್ರಿ. ಶ. ಮೊದಲನೆಯ ಶತಮಾನದಲ್ಲಿ ಗ್ರೀಸಿನಲ್ಲಿ ಭೂಗೋಳವನ್ನು ರಚಿಸಿದ ಸ್ಟ್ರಾಬೊ ಎಂಬಾತನು ಪಾಂಡ್ಯ ಅರಸರ ರಾಯಭಾರಿಯೊಬ್ಬನು ಚಕ್ರವರ್ತಿ ಆಗಸ್ಟಸ್‌ನ ಸಿಂಹಾಸನಾರೋಹಣದ ಉತ್ಸವದಲ್ಲಿ ಭಾಗಿಯಾಗಿದ್ದನೆಂದು ಉಲ್ಲೇಖಿಸಿದ್ದಾನೆ. ಆರ್. ಬಿ. ಡಿಕ್ಸನ್ ಎಂಬ ಪ್ರಸಿದ್ಧ ಪುರಾತತ್ವ ಶೋಧಕ ಮತ್ತು ಇತಿಹಾಸಕಾರನು, ಕ್ರಿ. ಪೂ. ಮೊದಲ ಸಾವಿರ ವರ್ಷಗಳಲ್ಲಿಯೇ ತಮಿಳರು ಮಲಯ, ಉತ್ತರ ಬೋರ್ನಿಯೋ ಮತ್ತು ಉತ್ತರ ಫಿಲಿಪ್ಪೈನ್ಸ್‌ಗಳೊಂದಿಗೆ ವ್ಯಾಪಕವಾದ ವ್ಯಾಪಾರ ಸಂಪರ್ಕಗಳನ್ನೇರ್ಪಡಿಸಿಕೊಂಡಿದ್ದರೆಂದು ಖಚಿತಪಡಿಸಿದ್ದಾನೆ. ಈ ವ್ಯಾಪಾರ ಸಂಪರ್ಕದಿಂದ ತಮಿಳರು ಅಲ್ಲೇ ತಳವೂರಿ ಆ ದೇಶಗಳನ್ನು ಗೆದ್ದು ವಸಾಹತುಗಳನ್ನೇರ್ಪಡಿಸಿಕೊಳ್ಳಲು ಕಾರಣವಾಯಿತು ಎಂದು ತಿಳಿಸಿದ್ದಾನೆ. ಪಾಲ್ ಪೆಲಿಯಟ್‌ನ ಪ್ರಕಾರ ಕ್ರಿ. ಪೂ. 2 ನೆಯ ಶತಮಾನದಷ್ಟು ಮೊದಲೇ ಚೈನಾ ಚಕ್ರಾಧಿಪತ್ಯ ಹಾಗೂ ಭಾರತದ ದಕ್ಷಿಣ ಕಡಲ ತೀರಪ್ರದೇಶಗಳೊಂದಿಗೆ, ರಾಯಭಾರ ಸಂಬಂಧಗಳು ಇದ್ದುವೆಂಬುದಕ್ಕೆ ಚೀನೀ ಸಾಹಿತ್ಯದಲ್ಲಿ ಉಲ್ಲೇಖಗಳಿವೆ. ಕ್ರಿ. ಶ. ಮೊದಲ ಶತಮಾನದ ಕೊನೆಯಲ್ಲಿದ್ದ ಪಾನ್‌ಕೋವ್ ಎಂಬ ಚೀನೀ ಬರಹಗಾರನು ಹುವಾ ಚಕ್ರವರ್ತಿಗಳ ಕಾಲದಲ್ಲಿ ಚೋಳ ದೊರೆಗಳು ಚೀನಾಕ್ಕೆ ರಾಯಭಾರಿಗಳನ್ನು ಕಳುಹಿಸಿದ್ದರೆಂಬ ಸಂಗತಿಯನ್ನು ಉಲ್ಲೇಖಿಸಿದ್ದಾನೆ. (ನೋಡಿ : ಕೆ. ಎಂ. ಪಣಿಕ್ಕರರ "ಇಂಡಿಯಾ ಅಂಡ್ ಚೈನಾ"- ಪುಟ 17 ಮತ್ತು 19) ಪಾಂಡ್ಯರಾಜ್ಯದ ರಾಜಧಾನಿಯಾದ ಮಧುರೆಯ ಅರಮನೆಯ ಕಾವಲು ದಳದಲ್ಲಿ ಗ್ರೀಕರನ್ನು ನೇಮಿಸಲಾಗಿತ್ತು. ಪಾಂಡ್ಯರಾಜ್ಯದ ಕಡಲ ತೀರ ಪ್ರದೇಶಗಳಲ್ಲಿ ದೊರೆಯುವ ಮುತ್ತುಗಳು ವಿಶ್ವವಿಖ್ಯಾತವಾಗಿದ್ದು, ಪಾಶ್ಚಾತ್ಯ ದೇಶಗಳ ವರ್ತಕರುಗಳನ್ನು ವಿಶೇಷವಾಗಿ

ಆಕರ್ಷಿಸಿದ್ದುವು. ಅವರು ಭಾರತದ ಮುತ್ತುಗಳು, ಅಕ್ಕಿ ಮತ್ತು ನವಿಲುಗಳಿಗೆ ಬದಲಾಗಿ ಪಾಶ್ಚಾತ್ಯ ಮದ್ಯ-ಪಾನೀಯಗಳನ್ನು ವಿನಿಮಯ ಮಾಡಿಕೊಳ್ಳುತ್ತಿದ್ದರು. ಚೋಳದೊರೆ ಕರಿಕಾಲ ಚೋಳನು ಸಿಂಹಳ ದ್ವೀಪದ ಮೇಲೆ ದಂಡೆತ್ತಿ ಹೋಗಿ ಸಿಂಹಳ ರಾಜಕುವರ ಗಜಬಾಹುವಿನೊಂದಿಗೆ ಹನ್ನೆರಡು ಸಾವಿರ ಸಿಂಹಳೀಯರನ್ನು ಸೆರೆಹಿಡಿದು ತಂದು ಕಾವೇರಿ ನದಿಗೆ ಕಟ್ಟಲಾಗುತ್ತಿದ್ದ ಅಣೆಕಟ್ಟಿನ ಕೆಲಸದಲ್ಲಿ ತೊಡಗಿಸಿದನು. ಕಡಲಯಾನದ ಸಾಹಸ ಮತ್ತು ಕೌತುಕಗಳಿಗೆ ತಮಿಳರು ಪ್ರಸಿದ್ಧರಾಗಿದ್ದರು.

ಆಂತರಿಕವಾಗಿ ತಮಿಳು ನಾಡಿನ ಜನಜೀವನವು ಚೇರ, ಚೋಳ ಮತ್ತು ಪಾಂಡ್ಯ ರಾಜರುಗಳ ನಡುವೆ ಆ ಕಾಲದಲ್ಲಿ ನಡೆಯುತ್ತಿದ್ದ ಯುದ್ಧಗಳಿಂದ ರಕ್ತರಂಜಿತವಾಗಿತ್ತು.

ಶೈವ ಮತ್ತು ವೈಷ್ಣವ ಪಂಥಗಳು ತಮಿಳು ನಾಡಿನಲ್ಲಿಯೇ ಹುಟ್ಟಿ ಪ್ರವರ್ಧಮಾನಕ್ಕೆ ಬಂದ ಮತಗಳೆನ್ನಿಸಿದರೂ ಅವು ಕ್ರಿ. ಪೂ. 3 ನೆಯ ಶತಮಾನದಲ್ಲಿ ತಮಿಳು ನಾಡಿನ ಮೇಲೆ ದಾಳಿಯಿಟ್ಟ ಜೈನ, ಬೌದ್ಧ ಮತ್ತು ವೈದಿಕಬ್ರಾಹ್ಮಣ ಮತಗಳನ್ನು ಎದುರಿಸಬೇಕಾಗಿ ಬಂದಿತು. ತಮ್ಮ ಮತದ ಸಿದ್ಧಾಂತಗಳೊಂದಿಗೆ, ಈ ಮತಗಳು ತಮ್ಮ ಹೊಸ ಭಾಷೆಯ ಪ್ರಭಾವವನ್ನೂ ತಮಿಳರ ಮೇಲೆ ಹೇರಿದುವು. ಪಾಕೃತ, ಪಾಲಿ ಮತ್ತು ಸಂಸ್ಕೃತ ಭಾಷೆಗಳು ತಮಿಳುನಾಡನ್ನು ಪ್ರವೇಶಿಸುದವಲ್ಲದೆ ಹೊಸ ಮತಗಳು ಈ ಭಾಷೆಗಳ ಮೂಲಕ ತಮ್ಮ ಮತಪ್ರಚಾರವನ್ನು ನಿರ್ವಹಿಸಿದುವು. ತಮಿಳುನಾಡಿನಲ್ಲಿ ಪಟ್ಟಿಮನ್ರಗಳೆಂಬ ಪ್ರಸಿದ್ಧ ಚರ್ಚಾಕೂಟಗಳು ವಿಶಿಷ್ಟವೆನ್ನಿಸಿ ಅವುಗಳ ಮೂಲಕ ಪ್ರಚೋದಕಾರಿಯೂ ಆಧ್ಯಾತ್ಮಿಕವೂ ಹಾಗು ಮತೀಯವೂ ಆದ ವಾದವಿವಾದಗಳು ನಡೆದುವು. ಈ ಮಹಾಚರ್ಚಾಕೂಟಗಳಲ್ಲಿ ಗ್ರೀಕ್, ರೋಮನ್ ಮತ್ತು ಈಜಿಪ್ಟ್ ದೇಶದ ಚಿಂತನೆಗಳೂ ತಮಿಳರ ಚಿಂತನೆಯಲ್ಲಿ ವಿಲೀನವಾದುವು. ಬೇರೆ ಬೇರೆ ಮತಗಳ ಮುಂಚೂಣಿಯ ಪ್ರವರ್ತಕರೂ, ತಮಿಳು ನಾಡಿನ ಅರಸರ ಪ್ರಭಾವ ಮತ್ತು ಆಶ್ರಯವನ್ನು ಗಳಿಸಲು ತಮ್ಮ ತಮ್ಮಲ್ಲೇ ಸ್ಪರ್ಧೆ ನಡೆಸುತ್ತಿದ್ದರು. ಅವರುಗಳು ತಮ್ಮ ಭೌದ್ಧಿಕ ಹಾಗೂ ಆಧ್ಯಾತ್ಮಿಕ ಭರವಸೆಗಳೊಂದಿಗೆ ತಮಿಳುನಾಡಿನ ಅರಸರುಗಳನ್ನು ತಮ್ಮ ತಮ್ಮ ಮತಗಳಿಗೆ ಆಕರ್ಷಿಸಲು ಪ್ರಯತ್ನಿಸುತ್ತಿದ್ದರು. ಪ್ರತಿಯೊಂದು ಮತದ ಪ್ರತಿಪಾದಕರೂ ತಮ್ಮ ಮತಾನುಯಾಯಿಗಳ ರೋಗಗಳನ್ನು ನಿವಾರಿಸಲೂ ಪಾಪವನ್ನು ಪರಿಹರಿಸಲೂ ಇಹಪರಗಳೆರಡರಲ್ಲೂ ಸುಖ ಶಾಂತಿ ಲಭಿಸಲೂ ತಾವು ಅತೀಂದ್ರಿಯ ಶಕ್ತಿಯನ್ನು ಗಳಿಸಿರುವುದಾಗಿ ಹೇಳಿಕೊಳ್ಳುತ್ತಿದ್ದರು. ಕಠಿಣ ವ್ರತಗಳ ಆಚರಣೆ, ಸ್ವಯಂ ಪ್ರಾಣತ್ಯಾಗ ಮತ್ತು ಸತ್ಯವನ್ನು ನಿರಾಕರಿಸುವುದು ಮೊದ-

ಲಾದುವು ಈ ಆಕ್ರಮಿತ ಮತಗಳ ಪ್ರಮುಖ ಬೋಧನೆಗಳಾಗಿದ್ದುವು. ವೈದಿಕ ಬ್ರಾಹ್ಮಣ ಮತವು ಬದುಕನ್ನು ನಿರಾಕರಿಸುವುದಷ್ಟೇ ಅಲ್ಲದೆ ಜಾತಿಗಳ ಪ್ರಚಾರ ಮಾಡಿದವು ಮತ್ತು ಬೇರೆ ಬೇರೆ ಜಾತಿಗಳಿಗೆ ಧರ್ಮನೀತಿಗಳನ್ನು ಬೋಧಿಸಿದುವು-ಅಪರಾಧಗಳಿಗೆ ಶಿಕ್ಷೆ ವಿಧಿಸುವ ಕ್ರಮದಲ್ಲಿಯೂ ಅದು ಪಕ್ಷಪಾತ ತೋರಿಸುತ್ತಿತ್ತು. ಉದಾಹರಣೆಗೆ ಕೊಲೆಯ ಅಪರಾಧಕ್ಕೆ-ಶೂದ್ರನಾದರೆ ಅವನಿಗೆ ಮರಣ-ದಂಡನೆ, ದ್ವಿಜನಾದರೆ ಅವನಿಗೆ ದೇಶತ್ಯಾಗ ಎಂದು ವಿಧಿಸುತ್ತಿತ್ತು. ಆಕ್ರಮಿತ ಧರ್ಮಗಳು ಜೀವಿಸುವುದೇ ದುಃಖಕರವೆಂದೆಣಿಸಿ ಪ್ರಪಂಚವೇ ಮಾಯೆಯೆಂಬ ಮತ್ತು ಬದುಕುವುದೇ ಒಂದು ತೆರನಾದ ಬವಣೆಯೆಂಬ ಆಧಾರದ ಮೇಲೆ ಪ್ರಪಂಚವನ್ನು ಅದರ ಕಾರ್ಯಕಲಾಪಗಳನ್ನೂ ತ್ಯಜಿಸಬೇಕೆಂದೂ ಬೋಧಿಸಿದುವು. ತಮಿಳರಾದರೋ ಕ್ರಿ. ಪೂ. 3ನೆಯ ಶತಮಾನಕ್ಕೂ ಬಹಳ ಮುಂಚೆಯೇ ತಮ್ಮದೇ ಆದ ಸ್ವತಂತ್ರ ಮೌಲ್ಯ ಪದ್ಧತಿಯನ್ನು ನಿರ್ಮಿಸಿಕೊಂಡಿದ್ದರು. ಈ ಮೌಲ್ಯವು ಗುಣದ ದೃಷ್ಟಿಯಿಂದ ದೃಢವಾಗಿ ಸಮಾನಸ್ಕಂಧವಾಗಿದ್ದು ಮನೋಭಾವನೆಯಲ್ಲಿ ನೈತಿಕ ಪರವಾಗಿತ್ತು. ಆಲ್ಬರ್ಟ್ ಷ್ವೈಟ್ಜರ್ ಹೇಳುವಂತೆ "ಲೋಕ ಮತ್ತು ಬದುಕಿನ ಅಸ್ತಿತ್ವದ ನೀತಿ ತಮ್ಮ ಬಾಂಧವರನ್ನು, ಸಮಾಜವನ್ನು, ದೇಶವನ್ನು, ಮಾನವ ಸಮುದಾಯವನ್ನು ಮತ್ತು ಸಮಸ್ತ ಜೀವಿಗಳನ್ನೂ ಹೃತ್ಪೂರ್ವಕವಾಗಿ ಪ್ರೇಮಿಸಬೇಕೆಂಬುದಾಗಿ ಒತ್ತಾಯಪಡಿಸುತ್ತವೆ. 'ಪ್ರಪಂಚ ಮತ್ತು ಜೀವನ ನಶ್ವರತೆ' ಯಾದರೋ ಈ ಪ್ರಪಂಚದಲ್ಲಿ ಯಾವ ಆಸಕ್ತಿಯನ್ನೂ ವಹಿಸುವುದಿಲ್ಲ. ಈ ಭೂಮಿಯ ಮೇಲೆ ಮಾನವನು ಕೈ ಕೊಳ್ಳುವ ಪ್ರಯಾಣವು ಅವನು ಭಾಗವಹಿಸಲೇ ಬೇಕಾದ ಒಂದು ನಾಟಕವೆಂದೋ ಇಲ್ಲವೆ ದೇಶಕಾಲಗಳ ಮೂಲಕ ತನ್ನ ಶಾಶ್ವತ ನೆಲೆಗೆ ಸಾದು ಹೋಗಬೇಕಾದ ಸಮಸ್ಯಾತ್ಮಕವಾದ ಒಂದು ತೀರ್ಥಯಾತ್ರೆಯೆಂದೋ" ಪರಿಗಣಿಸುತ್ತದೆ. ಸ್ವಕೀಯವಾದ ಮೌಲ್ಯಗಳ ವ್ಯವಸ್ಥೆಯು ದುರಾಕ್ರಮಣಕ್ಕೆ ಗುರಿಯಾಗಿತ್ತು ಮತ್ತು ಛಿದ್ರ ಛಿದ್ರವಾಗುವ ಅಪಾಯದಲ್ಲಿಯೋ ಇಲ್ಲವೆ ನಿರ್ನಾಮವಾಗುವ ಹಂತದಲ್ಲಿಯೋ ಇದ್ದಿತ್ತು. ಅವ್ಯವಸ್ಥೆ ಮತ್ತು ಅದಕ್ಕೆ ಹೊಂದಿದಂತೆ ನಡೆದ ಉಗ್ರವಾದ ವಾದವಿವಾದಗಳಿಂದ ತಮಿಳುನಾಡಿನಲ್ಲಿ ಸ್ಥಗಿತವಾದಂತಿದ್ದ ನೆಮ್ಮದಿಯು ಭಂಗವಾಗತೊಡಗಿತು.

ಆಂತರಿಕವಾಗಿಯೂ, ಬಾಹ್ಯವಾಗಿಯೂ ತಮಿಳುನಾಡಿನಲ್ಲಿ ಈ ಯುಗವು ಪ್ರಕ್ಷುಬ್ಧಮಯವಾಗಿತ್ತು. ಈ ಯುಗದ ಪ್ರಬಲ ತಮಿಳನು ಪರಸ್ಪರ ವಿರುದ್ಧವಾದ ಅಭಿಪ್ರಾಯಗಳಿಗೂ, ಆದರ್ಶಗಳಿಗೂ ಸಿಕ್ಕುಬಿದ್ದು ಒಂದು ಮಹಾಶಕ್ತಿಯಂತಿದ್ದನು. ಅವನ ಆಸೆಗೆ ಇತಿಮಿತಿ ಇರಲಿಲ್ಲ; ಸ್ವಸಾಮರ್ಥ್ಯವನ್ನು ಬೆಳೆಸಿಕೊಳ್ಳಲು ಆತುರನಾಗಿದ್ದನು. ಕ್ರಿಯೆ ಮತ್ತು ಮಾತುಗಳಲ್ಲಿ ಹಿಂಸಾಪರನಾಗಿದ್ದನು.

ಅದು ಧಾರ್ಮಿಕವೂ, ತಾತ್ವಿಕವೂ ಆದ ವಾದ-ವಿವಾದಗಳ ಕಾಲವಾದುದರಿಂದ ತಮಿಳುನಾಡಿನಲ್ಲಿ ವಾಗ್ಮಿಗಳು ಹೆಚ್ಚಿದರು. ಅವರು ಯಶಸ್ವಿಯಾದ ಮಾತುಗಾರಿಕೆಯ ಸಮಸ್ತ ಚಾತುರ್ಯಗಳನ್ನು ಅವಲಂಬಿಸಿದರು. ಅವರು ಪ್ರಶ್ನೆಯ ಒಂದು ಮುಖವನ್ನು ಭಾವಾವೇಶದಿಂದ ಮಂಡಿಸುವಲ್ಲಿ, ಕೆಲವು ವೇಳೆ ಸತ್ಯವನ್ನು ಮರೆಮಾಚಿ ಸುಳ್ಳನ್ನೇ ಸೂಚಿಸುವುದರಲ್ಲಿ ನಿಸ್ಸೀಮರಾಗಿದ್ದರು. ಈ ಪ್ರಚಂಡ ವಾಗ್ಮಿಗಳು, ಚತುರವಾದ ಕುತರ್ಕಗಳಿಂದಲೂ, ಹಾನಿಕರವಾದ ಪೊಳ್ಳು ತತ್ವಗಳಿಂದಲೂ ದೇಶದಲ್ಲೆಲ್ಲ ಹೊಂಚುಹಾಕುತ್ತ ತಮಿಳುನಾಡಿನ ವಾತಾವರಣವನ್ನು ಕಲಕಿದರು. ಪಾಲಿ ಮತ್ತು ಸಂಸ್ಕೃತ ಭಾಷೆಗಳು ಜನರ ನಡೆನುಡಿಯಾದ ತಮಿಳಿನ ಮೇಲೆ ತಮ್ಮ ಅಧಿಕಾರವನ್ನು ನಡೆಸಲು ಸೆಣಸಾಡುತ್ತಿದ್ದುವು. ವಾಸ್ತವಿಕವಾಗಿ ಪಾಲಿ ಭಾಷೆಯು ಪಾಂಡ್ಯರಾಜ್ಯದ ಆಡಳಿತ ಭಾಷೆಯಾಗುವಲ್ಲಿ ಯಶಸ್ವಿಯಾಯಿತೆಂದು ತೋರಿ ಬರುತ್ತದೆ. ತಮಿಳು ಭಾಷೆಯ ಪ್ರತಿಪಾದಕರು ತಮಿಳಿಗೆ ಪುನಃ ಆಡಳಿತ ಭಾಷೆಯ ಸ್ಥಾನವನ್ನು ದೊರಕಿಸಿಕೊಡಲು ಹೋರಾಟವನ್ನು ನಡೆಸಬೇಕಾಯಿತೆಂದು ಊಹಿಸುವುದು ಸಕಾರಣವಾಗಿದೆ. ದುರ್ವ್ಯಸನಗಳು, ಕ್ರೌರ್ಯ ಮತ್ತು ಹಿಂಸೆಗಳು ಈ ಸಂಘರ್ಷಣ ಯುಗದ ಉಪಫಲಗಳಾಗಿದ್ದಿರಬೇಕು.

ಆಕ್ರಮಣಶೀಲವೂ, ಸಂಶೋಧನಾತ್ಮಕವೂ ಆದ ದೂರದ ಜಲಯಾನಗಳಿಂದ ತಮಿಳರ ಮನೋದಿಗಂತವು ವಿಸ್ತಾರವಾಯಿತು. ಆ ಉದ್ರೇಕಕಾರಿಯಾದ ಕಾಲದ ಎಲ್ಲ ಪ್ರಭಾವಗಳೂ ತಮಿಳರ ಮನಸ್ಸಿನ ಮೇಲೆ ಪರಿಣಾಮ ಬೀರಿದುವು.

ಮತೀಯ ಶಾಸ್ತ್ರಗಳನ್ನು ಕುರಿತಂತೆ ನಡೆದ ಅಗಾಧವಾದ ಚರ್ಚೆಗಳಿಂದ ಜನರು ಮೂಢನಂಬಿಕೆಗಳನ್ನು ತೊರೆದು ವಿಚಾರಪರರಾದರು. ಮತಗಳ ಹೆಸರಿಗೆ ಕಟ್ಟುಬೀಳದೆ ಆಧ್ಯಾತ್ಮಿಕವಾದ ತಿರುಳಿನತ್ತ ತಿರುಗಿದರು. 48 ಸದಸ್ಯರನ್ನು ಒಳಗೊಂಡ ಫ್ರಾನ್ಸಿನ ಸಾಹಿತ್ಯ ಸಂಸ್ಥೆಯಂತೆಯೇ 49 ಸದಸ್ಯರುಗಳಿಂದ ಕೂಡಿದ ಮೂರನೆಯ ತಮಿಳು ಸಂಘವೆಂಬ ಸಾಹಿತ್ಯ ಸಂಸ್ಥೆಯು ಸಾಮ್ರಾಜ್ಯದ ರಾಜಧಾನಿಯಾದ ಮಧುರೆಯಲ್ಲಿ ಇದ್ದಿತು. ಅದು ತಮಿಳು ಭಾಷೆಯ ಮೇಲೆ ಎಚ್ಚರವಹಿಸಿ ಅದರ ಪ್ರಗತಿಗೆ ಮಾರ್ಗದರ್ಶಕವಾಯಿತು. ತನ್ನ ಪ್ರಕಟಣೆಗಳ ಮೂಲಕ ತಮಿಳರ ವಿಚಾರ ಸಾರವನ್ನು ಪ್ರತಿಬಿಂಬಿಸಿತು. ತಮಿಳು ಪ್ರಪಂಚದಲ್ಲೆಲ್ಲ ಈ ಸಂಸ್ಥೆಯುಎಷ್ಟು ಗೌರವಸ್ಥಾನವನ್ನುಗಳಿಸಿತ್ತೆಂದರೆ ಯಾವ ಹೊಸ ಸಾಹಿತ್ಯಕೃತಿಯೂ ಆ ವಿದ್ವತ್ ವೃಂದದವರಿಂದ ಅಂಗೀಕೃತವಾದ ಹೊರತು ಪ್ರಕಟವಾಗುವಂತಿರಲಿಲ್ಲ.

ತಿರುವಳ್ಳುವರ ತಿರುಕ್ಕುರಳ್ ರಚನೆಯಾಗುವುದಕ್ಕೆ ಮುಂಚೆ ಬಹು ಸಂಖ್ಯೆಯಲ್ಲಿ ಸಂಘರ್ಷ ಕಾಲದ ಕಾವ್ಯಗಳು ಪ್ರಚುರವಾಗಿದ್ದುವು. ತೊಲ್‌ಕಾಪ್ಪಿಯಂ

ದಂತಹ ಸುಪ್ರಸಿದ್ಧವಾದ ತಮಿಳು ಲಕ್ಷಣಗ್ರಂಥ ಕ್ರಿ.ಪೂ. 3ನೆಯ ಶತಮಾನ ದಲ್ಲಿಯೇ ಸೃಷ್ಟಿಯಾಗಿತ್ತು. 'ಅಗತ್ತಿಯಂ' ಎಂಬ ವ್ಯಾಕರಣ ಗ್ರಂಥವೊಂದು ಅದಕ್ಕೂ ಮೊದಲೇ ಸಂಪಾದಿಸಲ್ಪಟ್ಟಿತ್ತು. ತಿರುವಳ್ಳುವರಿಂದ ತಮಿಳುನಾಡು ಹಿರಿದೆನಿಸಲು ಈ ಕೃತಿಗಳು ಮೂಲಭೂತವೂ ಸತ್ವದಾಯಕವೂ ಆದುವು. ತಿರುವಳ್ಳುವರು ಮಾಡಿದ ಮಹತ್ತಾದ ಕೆಲಸವೆಂದರೆ ಬೌದ್ಧ, ಜೈನ, ವೈದಿಕ ಮತಗಳ ಚಿಂತನೆಗಳಲ್ಲಿರುವ ಉತ್ತಮಾಂಶಗಳನ್ನು ಸ್ವೀಕರಿಸಿ ತಮಿಳರ ಮೌಲ್ಯ ಪದ್ಧತಿಗಳನ್ನು ಸಂರಕ್ಷಿಸಿ, ಸೂತ್ರೀಕರಿಸಿ, ವಿಸ್ತರಿಸಿದ್ದು. ತತ್ವಗಳ, ಸಂಘರ್ಷಣಗಳ ಮಧ್ಯೆ ಬಾಳಿದ ತಿರುವಳ್ಳುವರು ತಮ್ಮ ಕಾಲದ ವಾದ–ವಿವಾದಗಳ ಕ್ಷುದ್ರತೆಗಳನ್ನು ಮೀರಿ ಎಲ್ಲ ಮತಗಳನ್ನೂ ಒಂದುಗೂಡಿಸುವ ಮತ್ತು ಬೆಸೆಯುವ ನಿಯಮಗಳನ್ನು ಮನಗಂಡು, ತಮ್ಮ ಬೌದ್ಧಿಕ ಸ್ವಾತಂತ್ರ್ಯವನ್ನು ಸಾಧಿಸಿದರು. ಅವರು ಪರಿ ಪೂರ್ಣತೆಯ ಬೆಳಕಿನಲ್ಲಿ ಒಂದು ವಿಭಾಗವನ್ನು ನೋಡಬಲ್ಲ ಪ್ರಜ್ಞೆಯನ್ನು ಪಡೆ ದಿದ್ದರು. ನಿಸ್ಸಾರವಾದದ್ದರಲ್ಲಿ ಸಾರವನ್ನೂ, ತಾತ್ಕಾಲಿಕವಾದದ್ದರಲ್ಲಿ ಸಾರ್ವ ಕಾಲಿಕವಾದದ್ದನ್ನೂ, ಪ್ರತ್ಯೇಕ ವಿಭಾಗದಲ್ಲಿ ಪೂರ್ಣವಾದುದನ್ನೂ ಒಡನೆಯೇ ಗ್ರಹಿಸಬಲ್ಲ ಅಂತದೃಷ್ಟಿಯನ್ನೂ, ಪ್ರತಿಭಾಶಕ್ತಿಯನ್ನೂ ಪಡೆದಿದ್ದರು. ಅವರು ತಮ್ಮ ಕಾಲದ ಬಲಿಷ್ಠವಾದ ಕಟ್ಟುಕಟ್ಟಳೆಗಳನ್ನು ಕಾವ್ಯದಲ್ಲಿಯೇ ಅಸದೃಶವೆನಿಸು ವಷ್ಟು ತೀವ್ರತೆಯಿಂದ ಪ್ರತಿಭಟಿಸಿದರು.

ಹುಟ್ಟಿನಿಂ ಮನುಜಕುಲವೆಲ್ಲ ಒಂದೆ
ಕರ್ಮವವರನು ತರತಮದಿ ಬೇರ್ಪಡಿಸುವುದು (972)

ಎಂದು ಉದ್ಘೋಷಿಸುವ ಕೆಚ್ಚನ್ನು ಪಡೆದಿದ್ದರು.

ಅವರು ಅತ್ಯುನ್ನತವಾದ ದೃಢ ಶಕ್ತಿಯಿಂದ ಕೂಡಿದವರಾಗಿದ್ದರು. ಬಾಳಿನ ಪರವಾಗಿ ತಮ್ಮ ದೃಢ ನಿರ್ಧಾರವನ್ನು ನೀಡುವಲ್ಲಿ ಅವರು ಪ್ರಪಂಚವು ಸತ್ಯವೆಂದು ಪ್ರತಿಪಾದಿಸಿದರು. ಏಕೆಂದರೆ ದಯಾಪರತೆಯೇ ಮೊದಲಾದ ಶಾಶ್ವತ ಸತ್ಯಗಳು ಐಹಿಕ ಜೀವನದ ಒಂದು ಅವಿಭಾಜ್ಯ ಅಂಗವಾಗಿವೆ.

ಬೆಚ್ಚನೆಯ ಮಾನವೀಯತೆ, ಆಳವಾದ ಒಲವು ಮತ್ತು ಅನುಕಂಪಗಳುಳ್ಳ ಸೂರ್ಯನು ತಿರುವಳ್ಳುವರ ಸಮಗ್ರ ಕೃತಿಯಲ್ಲಿ ಪ್ರಜ್ವಲಿಸುತ್ತಿದ್ದಾನೆ.

ತಿರುವಳ್ಳುವರು ಹೇಳುತ್ತಾರೆ:

ಪ್ರೀತಿ ಇಲ್ಲದವರು ಎಲ್ಲವೂ ತಮ್ಮದೆಂದೊರಲುವರು
ಪ್ರೀತಿಯುಳ್ಳವರು, ತಮ್ಮ ಎಲುಬು ಎಲ್ಲವೂ
ಪರರದೆಂದು ತಿಳಿವರು (72)

ಇದು ಆತ್ಮತ್ಯಾಗ ಮತ್ತು ವಿಮೋಚನಾತ್ಮಕ ಲಕ್ಷಣಗಳುಳ್ಳ ಪ್ರೀತಿಯ ಪ್ರಶಂಸನೀಯ ಪ್ರತಿಪಾದನೆಯೇ ಸರಿ. ವಳ್ಳುವರ್ ಮುಂದುವರಿದು ಹೇಳುತ್ತಾರೆ:

ದೇಹದ ಒಳ ಅಂಗವಾದ ಪ್ರೀತಿಯೆ ಇಲ್ಲದವರಿಗೆ
ಬಾಹ್ಯ ಅಂಗಗಳಿದ್ದೂ ಫಲವೇನು ? (79)

ಮಾನವ ಚೈತನ್ಯದ ಅತ್ಯುನ್ನತ ಅಭಿವ್ಯಕ್ತಿಯೇ ಪ್ರೀತಿಯೆಂದೂ, ಪ್ರೀತಿಗನು ಗುಣವಾಗಿ ಬಾಳುವುದೇ ಮನುಷ್ಯನಿಗೆ ಸಾಧ್ಯವಾಗಬಹುದಾದ ಪರಮೋಚ್ಚವಾದ ಸದ್ಗುಣವೆಂದೂ ತಿರುವಳ್ಳುವರು ತಮ್ಮ ಗ್ರಂಥದ ಉದ್ದಕ್ಕೂ ಪ್ರತಿಪಾದಿಸುವ ವಿಷಯ. ವಾಸ್ತವಿಕವಾಗಿ ಈ ಕೆಳಗಿನ ಕುರಳಿನಲ್ಲಿ ಆ ಸತ್ಯವನ್ನು ಒತ್ತಿ ಹೇಳಿದ್ದಾರೆ:

ಪ್ರೀತಿಯು ಸ್ವಭಾವದಲ್ಲಿಯೇ ಮಾನವನ ಇರವು
ಬೇರು ಬಿಟ್ಟಿದೆ
ಪ್ರೀತಿ ಕಂಡರಿಯದವರು ತೊಗಲು ಹೊದಿಸಿದ
ಎಲುಬಿನ ಗೂಡಿನ ಸಮಾನರು (80)

ಪ್ರೀತಿಯ ಕಾರ್ಯವು ಸ್ವಯಂಪ್ರೇರಿತವಾದುದೆಂದೂ, ಭವಿಷ್ಯ ಜೀವನದಲ್ಲಿ ಅದು ಯಾವ ಪ್ರತಿಫಲವನ್ನೂ ನಿರೀಕ್ಷಿಸಕೂಡದೆಂದೂ ವಳ್ಳುವರ ದೃಷ್ಟಿ. ಅವರ ಮೇರೆಗೆ ಪ್ರೀತಿಯ ಕ್ರಿಯೆಯನ್ನು ಅದು ತತ್ಕಾಲದಲ್ಲಿ ನೀಡುವ ಸಂತೋಷದ ಮೂಲಕ ಅರಿಯಬೇಕಾದದ್ದು.

ಅವರೆನ್ನುತ್ತಾರೆ:

ಬೇಡುವದದು ಧರ್ಮವೆಂದರಿತರೂ ಅದು ಕೆಟ್ಟದು
ಕೊಡುವದರಿಂ ಮುಂದೆ ಸ್ವರ್ಗಸುಖವಿಲ್ಲವೆಂದಾದರೂ
ಅದು ಒಳ್ಳೆಯದೇ. (222)

ಪ್ರೀತಿಯ ಸ್ವಯಂಪ್ರೇರಿತ ಕ್ರಿಯೆಯನ್ನು ಈ ಕೆಳಗಿನ ಕುರಳಿನಲ್ಲಿ ಮತ್ತಷ್ಟು ವಿವರವಾಗಿ ಹೇಳಿದ್ದಾರೆ:

ಪ್ರತಿಫಲ ನಿರೀಕ್ಷಿಸದೆ, ಭುವಿಯ ಮೇಲೆ ವರ್ಷವನು
ಸುರಿಸುವ ಮೋಡಗಳಿಗೆ

ಈ ಲೋಕ ಉಪಕೃತಿಯು ತೀರಿಸುವ ಬಗೆಯೆಂತು ? (211)

ವಳ್ಳುವರು ಪ್ರತಿಯೊಂದು ಮತದಲ್ಲಿಯೂ ಉತ್ತಮವಾಗಿದ್ದು, ಯಾವ ತತ್ವಗಳು ಹಿತಕರವೆನಿಸಿದುವೋ ಅವುಗಳನ್ನು ಆರಿಸಿಕೊಂಡು ತಮಿಳರ ಆಧ್ಯಾತ್ಮಿಕ ಸಂಪ್ರದಾಯ ಮತ್ತು ನೈತಿಕ ಆಲೋಚನೆಗಳೊಂದಿಗೆ ಪರಸ್ಪರವಾಗಿ ಒಂದುಗೂಡಿಸಿ ಪ್ರಶಸ್ತವಾದ ಸಂಯೋಜನೆಯನ್ನು ನಿರ್ಮಿಸಿದರೆಂದು ತೋರಿಬರುತ್ತದೆ. ಈ ಸಂಯೋಜನೆಯನ್ನು ಎಷ್ಟು ಕುಶಲತೆಯಿಂದ ನಿರ್ವಹಿಸಲಾಗಿದೆಯೆಂದರೆ ಅದು ಯಾವೊಂದು ಮತ ಸತ್ವದೊಂದಿಗೂ ಘರ್ಷಣೆಗೆ ಒಳಗಾಗಿಲ್ಲ. ಇದರ ಪರಿಣಾಮವಾಗಿ ಪ್ರತಿ ಮತದವರೂ ತಿರುವಳ್ಳುವರ್ ತಮ್ಮ ಮತದ ಅನುಯಾಯಿಯೆಂದು ಹೇಳಿಕೊಳ್ಳತೊಡಗಿದರು.

ಹೀಗೆ ತಿರುವಳ್ಳುವರು ತಮ್ಮ ಮತದವರೆಂದು ಪೈಪೋಟಿಯಿಂದ ವಾದಿಸುವವರಲ್ಲಿ ಕ್ರೈಸ್ತಮತ ಪಂಡಿತರ ವಾದ ಅತ್ಯಂತ ವಿಲಕ್ಷಣವಾದದ್ದು. ಸಹಮಾನವರಲ್ಲಿ ದಯೆ, ಪ್ರೀತಿ ಮತ್ತು ಕ್ರಿಯಾತ್ಮಕ ಸೇವೆಗಳನ್ನು ಕ್ರೈಸ್ತ ಮತೀಯರಿಗಿಂತ ಪೂರ್ವದಲ್ಲಿ ಬೇರೆ ಯಾರೂ ಬೋಧಿಸಲಿಲ್ಲವೆಂಬ ತಪ್ಪು ಎಣಿಕೆಯೇ ಈ ವಾದಕ್ಕೆ ಆಧಾರವಾಗಿರುವಂತೆ ತೋರುತ್ತದೆ. ಸ್ಟೀಫನ್ ನೀಲ್ ಎಂಬ ಪ್ರಸಿದ್ಧ ಆಂಗ್ಲ ದೈವಶಾಸ್ತ್ರಜ್ಞ ಕ್ರೈಸ್ತರ ಈ ವಾದಕ್ಕೆ ಅಂತಿಮವಾಗಿ ತನ್ನ ತೀರ್ಪು ನೀಡಿದ್ದಾನೆ. ಅವನು ಹೇಳಿದ ಮಾತುಗಳಿವು: ಈ ತಮಿಳು ಗ್ರಂಥಕರ್ತರನ್ನು ಡಾ|| ಪೋಪ್ ಅವರು ಈ ಮಹಾಕೃತಿಯಲ್ಲಿ ತಾಳಿದ ಉತ್ಸಾಹ, ಕ್ರೈಸ್ತಮತದ ಪ್ರಭಾವ ಇವರ ಮೇಲಿದೆ ಎಂಬ ಅವರ ವಿಲಕ್ಷಣ ಊಹೆಗಳತ್ತ ಸೆಳೆದೊಯ್ದಿದೆ. "ಆಲೋಚನಾಪರ ಕವಿಯಾದ ತಿರುವಳ್ಳುವರು ಎಲ್ಲ ಮೂಲೆಗಳಿಂದಲೂ ಜ್ಞಾನವನ್ನು ಸಂಕಲಿಸುವ ಭಾವನೆಯುಳ್ಳವರಾಗಿದ್ದರೆಂದು ನಾವು ಊಹಿಸಿಕೊಳ್ಳುವಂತೆ, ಎಚ್ಚರವೀಯುವಂತಿದೆ. ಅವರು ಕಡಲ ತೀರದಲ್ಲಿ ಕ್ರೈಸ್ತಮತ ಪ್ರಚಾರಕರೊಂದಿಗೆ ಸಂಚರಿಸುತ್ತಿರುವುದಾಗಿಯೂ ಅಲೆಕ್ಸಾಂಡರ್ ಪಂಥದವರಿಗೇ ವಿಶಿಷ್ಟವಾದ ಕ್ರೈಸ್ತಮತದ ಭಾವನೆಗಳನ್ನು ಗ್ರಹಿಸುತ್ತಿರುವುದಾಗಿಯೂ ಅವುಗಳನ್ನು ತನ್ನದಾಗಿ ಮಾಡಿಕೊಂಡು ಕುರುಳಿನಲ್ಲಿ ಅಡಕ ಮಾಡಿರುವರೆಂಬುದಾಗಿಯೇ ಚಿತ್ರಿಸಿಕೊಳ್ಳುವಂತಾಗುತ್ತದೆಯೆಂದು ನಾವು ಸ್ಥೂಲವಾಗಿ ಹೇಳಬಹುದು." (ನೋಡಿ: ಜಿ. ಯು. ಪೋಪ್– ದಿ ಸೇಕ್ರೆಡ್ ಕುರಳ್, 1886 |||) ಪ್ರಬಲವೂ ಪವಿತ್ರವೂ ಆದ ಕಲ್ಪನಾ ಶಕ್ತಿಯು ತನ್ನ ಗರಿಗಳನ್ನು, ಯಾವ ಸಮತೂಕದ ಪಾಂಡಿತ್ಯವೂ ಸಮ್ಮತಿಸದಂತೆ, ತನ್ನ ಮೇರೆ ಮೀರಿ ಕೆದರಿರುದವುನ್ನು ಬಿಟ್ಟು ಬೇರೆ ಯಾವುದೂ ನಮ್ಮನ್ನು ಎಚ್ಚರಿಸುವಂತಿಲ್ಲವೆಂದು ನಾನು ಶಂಕಿಸುತ್ತೇನೆ. ಸಾಹಿತ್ಯ ವಿಮರ್ಶಕನೊಬ್ಬನು ಅಸಾಧ್ಯ ಎಂಬ ಪದವನ್ನು ಬಹಳ ಎಚ್ಚರಿಕೆಯಿಂದ ಬಳಸುತ್ತಾನೆ. ಇದರಿಂದ ಎಷ್ಟೋ ಅಸಂಭವನೀಯ ಸಂಗತಿಗಳು ನಿಜವೆಂದು ರುಜುವಾತಾಗಿವೆ. ಆದರೆ ಕುರುಳಿನ

ಮೇಲೆ ಕ್ರೈಸ್ತ ಮತದ ಯಾವುದಾದರೂ ಪ್ರಭಾವವಾಗಿದೆಯೆನ್ನುವುದು, ಅಸಾಧ್ಯದ ಅಂಚನ್ನು ಸಹ ಮುಟ್ಟುವುದು ಅಸಂಭವನೀಯವೆಂದು ನಾನು ಒಪ್ಪಿಕೊಳ್ಳಬಯಸು ತ್ತೇನೆ. (ನೋ: Bhakti: Hindus and Christian 1974– ಸ್ಟೀಫೆನ್ ನೀಲ್, ಪುಟ 43 ಮತ್ತು 44) ಈ ಮೇಲಿನ ಮಾತನ್ನು ಪುಷ್ಟೀಕರಿಸಲು ಮತ್ತೊಂದು ಬಲವಾದ ಕಾರಣವೆಂದರೆ ತಿರುವಳ್ಳುವರು ಕ್ರಿಸ್ತಪೂರ್ವ ಯುಗದಲ್ಲಿ ಜೀವಿಸಿದ್ದರೆಂಬುದು. ಕೆಲ ಸಂದರ್ಭಗಳಲ್ಲಿ ಅವರು ಯೇಸುವಿಗಿಂತ ಮೊದಲೇ ಆಲೋಚಿಸಿರುವುದು ಮಾತ್ರವಲ್ಲದೆ ಅವನ ಬೋಧನೆಗಳಿಗಿಂತಲೂ ಮುಂದೆ ಹೋಗಿದ್ದಾರೆ ಎಂಬುದನ್ನು ಮುಂದಿನ ಅಧ್ಯಾಯಗಳಲ್ಲಿ ಪರಿಶೀಲಿಸಲಾಗುವುದು.

**ವಳ್ಳುವರ ಕಾಲ :**

ವಳ್ಳುವರ ಕಾಲವನ್ನು ಇದಮಿತ್ಥಂ ಎಂದು ನಿರ್ಧಾರವಾಗಿ ಹೇಳುವುದು ಕಷ್ಟ. ತಮಿಳು ವಿದ್ವಾಂಸರಲ್ಲಿ ತಿರುವಳ್ಳುವರ ಕಾಲದ ಬಗ್ಗೆ ತೀವ್ರ ಭಿನ್ನಾಭಿ ಪ್ರಾಯದ ಊಹಾಪೋಹಗಳಿಗೆ ಎಡೆಮಾಡಿ ಕೊಟ್ಟಿದೆ. ಆದರೆ ಸಾಹಿತ್ಯಿಕ ಹಾಗೂ ಐತಿಹಾಸಿಕ ಆಧಾರಗಳ ಕಾಲದ ಬಗ್ಗೆ ಅಂತಿಮ ತೀರ್ಮಾನಕ್ಕೆ ಬರಲಾಗದಿದ್ದರೂ ಕೆಲವೊಂದು ಸೂಚನೆಗಳಿಗೆ ಅವಕಾಶ ಮಾಡಿಕೊಟ್ಟಿದೆ. ಶಿಲಪ್ಪದಿಕಾರಂ, ಮತ್ತು ಮಣಿಮೇಖಲೈ-ಇವೆರಡೂ ಸಂಗಂ ಕಾಲದ ಪ್ರಸಿದ್ಧ ಮಹಾಕಾವ್ಯಗಳು. ಶಿಲಪ್ಪದಿಕಾರದ ಇಳಂಗೋ ಅಡಿಗಳ್ ಮತ್ತು ಮಣಿಮೇಖಲೈ ಕರ್ತೃ ಶಾತ್ತನಾರ್ ಸಮಕಾಲೀನರಾಗಿದ್ದವರು. ಈ ಎರಡು ಮಹಾಕಾವ್ಯಗಳಲ್ಲಿಯೂ ವಳ್ಳುವರ ಕಾಲವನ್ನು ಸಮರ್ಥಿಸಿಕೊಳ್ಳಲು ಆಂತರಿಕ ಆಧಾರಗಳಿವೆ. ಶಾತ್ತನಾರರ ಪ್ರಕಾರ ಚೇರವಂಶದ ಅರಸ ಶೆಂಗುಟ್ಟುವನ್ ಶಿಲಪ್ಪದಿಕಾರದ ನಾಯಕಿ ಕನ್ನಗಿಗೆ ಒಂದು ದೇವಾಲಯವನ್ನು ಕಟ್ಟಿಸಿದ. ಶಿಲಪ್ಪದಿಕಾರದ ಮೂರನೆಯ ಅಧ್ಯಾಯದಲ್ಲಿ ಲಂಕೆಯ ದೊರೆ ಗಜಬಾಹು ಚೇರದೊರೆ ಶೆಂಗುಟ್ಟುವನೊಂದಿಗೆ ಕನ್ನಗಿ ದೇವಾಲಯದ ಪೂಜೆಯೊಂದರಲ್ಲಿ ಪಾಲ್ಗೊಂಡಿದ್ದನೆಂದು ಉಲ್ಲೇಖಿಸಲಾಗಿದೆ. ಗಜಬಾಹು ಇದ್ದ ಕಾಲ ಯಾವುದೆಂಬ ಪ್ರಶ್ನೆಯೊಂದು ಇಲ್ಲಿ ಉದ್ಭವಿಸುತ್ತದೆ. ಸಿಂಹಳ ಚರಿತ್ರೆಯಿಂದ (History of ceylone, Vol. I, Part I ಪುಟಗಳು 183-185) ಗಜಬಾಹು ಎಂಬ ಹೆಸರಿನ ಇಬ್ಬರು ಅರಸರುಗಳಿದ್ದರೆಂದು ತಿಳಿದು ಬರುತ್ತದೆ. ಒಬ್ಬನು ಕ್ರಿ.ಶ. 114ರಿಂದ 136ರವರೆಗೆ ಆಳಿದನು. ಮತ್ತೊಬ್ಬನು ಕ್ರಿ.ಶ. 12ನೆಯ ಶತಮಾನದಲ್ಲಿ ಸಿಂಹಳವನ್ನು ಆಳಿದವನು. ಶಿಲಪ್ಪದಿಕಾರಂ ಮತ್ತು ಮಣಿಮೇಖಲೈಗಳೆರಡೂ ಕ್ರಿ.ಶ. 3ನೆಯ ಶತಮಾನದಲ್ಲಿ ರಚನೆಯಾದ ಕೃತಿಗಳೆಂದೂ ಕನ್ನಗಿ ದೇವಾಲಯದಲ್ಲಿ ಪೂಜೆ ಸಲ್ಲಿಸಿದ ಗಜಬಾಹು ಕ್ರಿ.ಶ. ಎರಡನೆಯ ಶತಮಾನ ದಲ್ಲಿದ್ದವನೆಂದೂ ಬಹುತೇಕ ತಮಿಳು ವಿದ್ವಾಂಸರು ಒಮ್ಮತವನ್ನು ವ್ಯಕ್ತಪಡಿಸಿ ದ್ದಾರೆ. ಮಣಿಮೇಖಲೈಯಲ್ಲಿ ತಿರುಕ್ಕುರಳನ್ನು ಗೌರವದಿಂದ ಉದಾಹರಿಸಿ ಅದರ

ಕರ್ತೃವನ್ನು ಪೊಯ್ಯಿಲ್ ಪುಲವನ್ (ಅಸತ್ಯವನ್ನಾಡದ ಕವಿ) ಎಂದು ಕರೆಯಲಾಗಿದೆ. ಶಿಲಪ್ಪದಿಕಾರದಲ್ಲಿ ಕೂಡ ಹಲವು ತಿರುಕ್ಕುರಳನ್ನು ಗೌರವದಿಂದ ಉಲ್ಲೇಖಿಸಲಾಗಿದೆ. ಕ್ರಿ.ಶ. ಎರಡನೆಯ ಶತಮಾನದ್ದೆಂದು ಕಂಡುಬರುವ ಕೆಲವು ಸಂಗಕಾಲದ ಕೃತಿಗಳಲ್ಲಿ ತಿರ ವಳ್ಳುವರನ್ನು 'ದೈವಿಕ ಕವಿ' ಎಂದು ಕರೆಯಲಾಗಿದೆ. ಈ ಆಧಾರಗಳು ತಿರುವಳ್ಳುವರು ಕ್ರಿ.ಶ. ಎರಡನೆಯ ಶತಮಾನಕ್ಕೂ ಮುಂಚೆ ಇದ್ದಿರಬೇಕೆಂಬುದನ್ನು ಸೂಚಿಸುತ್ತವೆ. ಆ ಕಾಲದಲ್ಲಿ ವಿಷಯಗಳ ಪ್ರಸಾರವು ಅನಿವಾರ್ಯವಾಗಿ ವಿಳಂಬವಾಗುತ್ತಿತ್ತು. ಆದ್ದರಿಂದಲೆ ಶಾತ್ತನಾರ್‌ನಂಥ ಕವಿ, ಅವರನ್ನು ದೈವಿಕ ಕವಿಯೆಂದು ಕರೆಯಬೇಕಾಗಿದ್ದಲ್ಲಿ ತಿರುವಳ್ಳುವರ ಕೀರ್ತಿ-ಪ್ರತಿಷ್ಠೆಗಳು ದೃಢವಾಗಿ ನಿಲ್ಲಲು ಸುಮಾರು ಎರಡು ಶತಮಾನಗಳಷ್ಟು ಆಗಿರಬಹುದೆಂದು ನಾವು ಭಾವಿಸಿದರೆ ತಪ್ಪಾಗಲಾರದು. ಡಾ॥ ಎಂ. ರಾಜಮಾಣಿಕ್ಕನಾರರು, ತಿರುವಳ್ಳುವರು ಕ್ರಿ. ಪೂ. 3ನೆಯ ಶತಮಾನದಿಂದ ಕ್ರಿ. ಪೂ. 1ನೆಯ ಶತಮಾನದ ನಡುವಣ ಅವಧಿಯಲ್ಲಿ ಜೀವಿಸಿದ್ದಿರಬಹುದೆಂದು ಹೇಳುತ್ತಾರೆ. (ನೋ: History of Tamil Language and Literature, ಪು. 123) ಅವರು ಅತಿ ಎಚ್ಚರದಿಂದ ಹೇಳಿದ ಈ ದೀರ್ಘಾವಧಿಯ ಸೂಚನೆಯನ್ನು ನಾವು ಒಪ್ಪಬಹುದಾಗಿದೆ.



## 3. ಭಾಷಾಂತರಗಳು ಮತ್ತು ಉದ್ಧೃತ ಕೃತಿಗಳು

ತಿರುವಳ್ಳುವರ್ ರಚಿಸಿದ ತಿರುಕ್ಕುರಳ್ ತಮಿಳು ಸಾಹಿತ್ಯ ಕೃತಿಗಳಲ್ಲಿಯೇ ಅತಿ ಹೆಚ್ಚು ಭಾಷಾಂತರಗಳನ್ನು ಉದ್ಧೃತಗಳನ್ನು ಹೊಂದಿರುವ ಗ್ರಂಥ. ಅಧಿಕ ವಾಗಿ ಉದಾಹೃತವಾಗಿರುವ ಕೃತಿಯೂ ಹೌದು.

ಮನಸೆಳೆಯಬಲ್ಲ ಈ ಕವಿಯ ಸಾರವತ್ತಾದ ಕುರಳೊಂದನ್ನು ಡಾ॥ ಗ್ರಾಲ್ ಎಂಬ ಜರ್ಮನ್ ವಿದ್ವಾಂಸರೊಬ್ಬರಿಗೆ ಇಂಗ್ಲೀಷಿನಲ್ಲಿ ಅನುವಾದಿಸಿ ವಿವರಿಸ ಲಾಯಿತು. ಅವರು ಅದರ ಆಕರ್ಷಣೆಗೆ ಮಾರುಹೋಗಿ ಕುರಳನ್ನು ಮೂಲದಲ್ಲೇ ಓದಿ ಸಂತೋಷಪಡಲು ತಮಿಳು ಭಾಷೆಯನ್ನು ಕಲಿತರು. ಅನಂತರದಲ್ಲಿ 1854 ರಲ್ಲಿ ಜರ್ಮನ್ ಭಾಷೆಗೂ, 1856ರಲ್ಲಿ ಲ್ಯಾಟಿನ್ ಭಾಷೆಗೂ ತಿರುಕ್ಕುರಳನ್ನು ಭಾಷಾಂತರ ಮಾಡತೊಡಗಿದರು. ಈ ಜರ್ಮನ್ ಪಂಡಿತನನ್ನು ಚಕಿತಗೊಳಿಸಿದ ಆ ಕುರುಳಿನ ಅನುವಾದ ಹೀಗಿದೆ:

ಈ ಎಳೆವೆಣ್ಣಿನ ಕಪ್ಪುಂಡ ಕಣ್ಣುಗಳಲಿ<br>
ಇಬ್ಬಗೆಯ ನೋಟಗಳು<br>
ಒಂದು ವೇದನೆಯ ಮೀಟುವುದು<br>
ಮತ್ತೊಂದು ಅದನು ಸಾಂತ್ವನಗೊಳಿಸುವುದು (1091)

ತಿರುಕ್ಕುರಳಿನ ಕೆಲವು ಮುಖ್ಯ ಭಾಗಗಳನ್ನು ಅನುವಾದಿಸಿದ ಅನಂತರ ಡಾ। ಗ್ರಾಲ್ ಹೀಗೆ ಅಭಿಪ್ರಾಯಪಟ್ಟರು: "ತಿರುಕ್ಕುರಳಿನ ಹೃದಯಂಗಮ ಪರಿಣಾಮವನ್ನು ಯಾವ ಅನುವಾದವೂ ಪ್ರಕಟಪಡಿಸಲಾರದು. ವಾಸ್ತವಿಕವಾಗಿ ಅದು ಬೆಳ್ಳಿಯ ಬಲೆಯಲ್ಲಿರುವ ಚಿನ್ನದ ಸೇಬುಹಣ್ಣೇ ಸರಿ.

ಉದ್ದಾಮ ಯುರೋಪಿಯನ್ ತಮಿಳು ಪಂಡಿತರಲ್ಲಿ ಒಬ್ಬರಾದ ಫಾದರ್ ಬೆಸ್ಚಿ ಅವರು ಕ್ರಿ.ಶ. 1730ರಲ್ಲಿ ತಿರುಕ್ಕುರಳಿನ ಮೊದಲ ಎರಡು ಭಾಗಗಳನ್ನು ಲ್ಯಾಟಿನ್ ಭಾಷೆಗೆ ಅನುವಾದಿಸಿದರು. ಫಾದರ್ ಬೆಸ್ಚಿ, ಕ್ರೈಸ್ತ ಮತಕ್ಕೆ ಜನರನ್ನು ಮತಾಂತರಿಸಲು ತಮಿಳು ನಾಡಿಗೆ ಮಿಷನರಿಯಾಗಿ ಬಂದರು; ಕ್ರೈಸ್ತರಲ್ಲದವರೆಲ್ಲರೂ ನರಕಕ್ಕೆ ಹೋಗುವರೆಂದು ದೃಢವಾಗಿ ನಂಬಿದವರು. ತಿರುಕ್ಕುರಳನ್ನು ಲ್ಯಾಟಿನ್ ಭಾಷೆಗೆ ಅನುವಾದಿಸಿ, ವಳ್ಳುವರ ಸದ್ವಿಚಾರಗಳ ಗಂಭೀರ ಚಿಂತನೆಗಳಲ್ಲಿ ಅವರು ತನ್ಮಯರಾದ ಮೇಲೆ ಫಾದರ್ ಬೆಸ್ಚಿಯವರು "ಅಕ್ರೈಸ್ತನಾಗಿ ವಳ್ಳುವರು ನರಕಕ್ಕೆ ಹೋಗಿದ್ದರೂ ಈ ಮುಕ್ತಗಳನ್ನು ಹಾಡಿದ ತಿರುವಳ್ಳುವರ ನಾಲಗೆಯು ನರಕಕ್ಕೆ ಹೋಗಿರಲಾರದು" ಎಂದು ಕಡ್ಡಾಯವಾಗಿ ಒಪ್ಪಿಕೊಳ್ಳಬೇಕಾಗಿ ಬಂತು.

ಪ್ರಸಿದ್ಧ ಫ್ರೆಂಚ್ ಪಂಡಿತರಾದ ಎಂ. ಏರಿಯಲ್ ಅವರು 1848ರಲ್ಲಿ ತಿರುಕ್ಕುರಳಿನ ಕೆಲಭಾಗಗಳನ್ನು ಫ್ರೆಂಚ್ ಭಾಷೆಗೆ ಅನುವಾದಿಸಿದರು. ಅವರು ತಮ್ಮ ಅನುವಾದದಲ್ಲಿ, ಅದಕ್ಕೂ ಹಿಂದೆ ಕ್ರಿ. ಶ. 1730ರಲ್ಲಿ ಒಬ್ಬ ಅಜ್ಞಾತ ಕರ್ತೃವಿನಿಂದ ಅನುವಾದಿಸಲ್ಪಟ್ಟ "ಬಿಬ್ಲಿಯಾಥಿಕ್ ನ್ಯಾಷನೇಲ್ ಆಫ್ ಫ್ರಾನ್ಸ್" ನಲ್ಲಿ ಸಂಗ್ರಹಿಸಿ ಇಡಲಾದ ಫ್ರೆಂಚ್ ಭಾಷೆಯ ಅನುವಾದವನ್ನು ಉಲ್ಲೇಖಿಸಿದ್ದಾರೆ.

ಯುರೋಪಿಯನ್ ಭಾಷೆಯಲ್ಲಿ ಬಂದಿರುವ ತಿರುಕ್ಕುರಳಿನ ಭಾಷಾಂತರಗಳು, ಯುರೋಪಿನ ದಾರ್ಶನಿಕರಲ್ಲಿ, ಅದರಲ್ಲೂ ಮತ ಪ್ರಚಾರಕರಲ್ಲಿ ಭಾರತೀಯರ ನಡತೆ ಮತ್ತು ಸಂಸ್ಕೃತಿಯ ಬಗ್ಗೆ ಅವರ ಮನದಲ್ಲಿ ಮೂಡಿದ್ದ ಶಂಕೆಗಳನ್ನು ನಿವಾರಿಸುವುದರಲ್ಲಿ ಬಹಳ ದೂರ ಸಾಗಿವೆ. ಸ್ವತಃ ಮತಪ್ರಚಾರಕರಾಗಿದ್ದ ರೆವರೆಂಡ್ ಡಾ. ಜೆ, ಲಾಜರಸ್ ಹೀಗೆ ಸಾರಿದ್ದಾರೆ. "ತಿರುಕ್ಕುರುಳಿನಲ್ಲಿರುವ ಭಾವನೆಗಳನ್ನು ಮತ್ತೆ ಸುಧಾರಿಸುವುದಾಗಲೀ ಅಥವಾ ಅದರ ಸಂಯೋಜನೆಯ ಕಟ್ಟಡವನ್ನು ಮತ್ತಷ್ಟು ಪರಿಣಾಮಕಾರಿಯಾಗಿ ಮಾಡುವುದಾಗಲೀ ಸಾಧ್ಯವಿಲ್ಲ. ಅದು ತನಗೆ ತಾನೇ ಪರಿಪೂರ್ಣವಾದ ಕಲ್ಲಿನಲ್ಲಿ ಕೆತ್ತಿದ ಚಿತ್ರಗಳ ಕುಸುರಿಗೆಲಸ. ಯಾವ ಒಂದು ಶಿಲೆಯ ಆಕಾರ, ಅಳತೆ ಅಥವಾ ವರ್ಣವಿನ್ಯಾಸದಲ್ಲಿ ತುಸು ಬದಲಾವಣೆಯಾದರೂ ಅದರ ಒಟ್ಟಂದದ ಸೊಬಗನ್ನು ಕುಂದಿಸಬಹುದು. ಇಂತಹ ಮಹಾಮಾನವನನ್ನು ಸೃಷ್ಟಿಸಿದ, ಅಪೂರ್ವ ಕೃತಿಯನ್ನು ನಿರ್ಮಿಸಿದ ರಾಷ್ಟ್ರದ ಜನಾಂಗವು, ವ್ಯರ್ಥವೂ ತುಚ್ಛವೂ ಆದುದಲ್ಲವೆಂದು ತಿಳಿಯುವುದು ನನ್ನ ಮನಸ್ಸಿಗೆ ಎಷ್ಟೋ ಉಲ್ಲಾಸ ಕೊಡುವಂತಿದೆ. ಸಾರಭೂತವಾದ ನೈತಿಕ ಬಲವುಳ್ಳ ಮಣ್ಣಿನಿಂದಲ್ಲದೆ ಅವರು ಬೋಧಿಸಿದ ನೈತಿಕತೆಯು ಬೆಳೆಯಲು ಸಾಧ್ಯವಿಲ್ಲ". "ತಮಿಳು ಜನರ ಸಂಘಟನೆಗಾಗಿ ಶ್ರಮಿಸುತ್ತಿರುವವರಿಗೆ ಕುರಳ್ ಒಂದು ವಿಶಿಷ್ಟವೂ ಗಾಢವಾದ ಆಸಕ್ತಿಯುಳ್ಳದ್ದೂ ಆದ ಗ್ರಂಥವಾಗಿರುವುದು" ಎಂದು ತಮ್ಮ ಒಡನಾಡಿಗಳಾದ ಮತ ಪ್ರಚಾರಕರಿಗೆ ಡಾ. ಲಾಜರಸ್ ಎಚ್ಚರಿಕೆಯಿತ್ತಿದ್ದಾರೆ.

ನಮ್ರತೆ, ಉದಾರತೆ ಮತ್ತು ನೋವುಂಟುಮಾಡಿದವರನ್ನು ಕ್ಷಮಿಸುವ ಗುಣ ಇವು ಕ್ರೈಸ್ತವಲ್ಲದ ರಾಷ್ಟ್ರಗಳು ಎಂದೂ ಬೋಧಿಸಿಲ್ಲ ಎಂಬ ಕಲ್ಪನೆ ಯುರೋಪಿನ ಕ್ರೈಸ್ತಮತ ಪ್ರಚಾರಕರಲ್ಲಿದ್ದಿತು. 1886ರಲ್ಲಿ ತಿರುಕ್ಕುರಳನ್ನು ಇಂಗ್ಲಿಷಿಗೆ ಅನುವಾದಿಸಿದ ರೆವರೆಂಡ್ ಡಾ. ಜಿ. ಯು. ಪೋಪ್ ಅವರು ಈ ಪೂರ್ವಗ್ರಹವನ್ನು ಬಲವಾಗಿ ಖಂಡಿಸಿ ಹೀಗೆ ಹೇಳಿದ್ದಾರೆ: "ನಮ್ರತೆ, ಉದಾರತೆ ಮತ್ತು ನೋವಿಗೆ ಪ್ರತಿಯಾಗಿ ಕ್ಷಮೆ- ಈ ಗುಣಗಳನ್ನು ಅರಿಸ್ಟಾಟಲನು ವಿವರಿಸಿಲ್ಲವೆಂದು ಗ್ರ್ಯಾಂಟ್ ಹೇಳುತ್ತಾನೆ. ತಿರುವಳ್ಳುವರಂಥ ತಮಿಳು ನೀತಿಜ್ಞನಿಂದ ಮನಮುಟ್ಟುವಂತೆ ಬೋಧಿತವಾದ ಈ ಗುಣಗಳು ಈಗ ಎಲ್ಲೆಲ್ಲೂ ಇವೆ. ಕುರಳಿನ ಜನಪ್ರಿಯತೆಗೆ ಬಹುಪಾಲು ಅದರ ಮನಸೆಳೆಯುವ ಕಾವ್ಯರೂಪವೇ ಕಾರಣ. ಇಲ್ಲಿ ಬಳಸಿರುವ

ಛಂದಸ್ಸಿನಿಂದ ಸಂಗ್ರಾಹ್ಯತೆಯೂ ಅನಿವಾರ್ಯವಾಗಿದೆ. ಅದು ತಮಿಳಿನ "ವಾಕ್ಯಾಚಾರ್ಯನ" ಮಾತುಗಳನ್ನು ಪರಿಣಾಮಕಾರಿಯಾಗಿ ಪ್ರಕಟಗೊಳಿಸಿದೆ. ಇವು ಉತ್ಕೃಷ್ಟವಾಗಿ ಆಯ್ದ ನೀತಿಯ ಸುಭಾಷಿತಗಳು. ವಿಷಯಗಳಲ್ಲಿ ಅವುಗಳ ಭಾವನೆಗಳಲ್ಲಿ ಹೇಳುವ ಕಾಲದಲ್ಲಿದ್ದ ಸಮಾಜದ ಪರಿಸ್ಥಿತಿಯಲ್ಲಿ ಗ್ರೀಸ್ ದೇಶದ ಸೂತ್ರೋಕ್ತಿಗಳೊಂದಿಗೆ ತೋರಿಬರುವ ಅವುಗಳ ಹೋಲಿಕೆ ಆಶ್ಚರ್ಯವೆನ್ನಿಸುತ್ತದೆ. ಗ್ರೀಸಿನ ನಾಡುನುಡಿಗಳಲ್ಲಿ ಮಾರ್ಷಲ್ ಮತ್ತು ಲ್ಯಾಟಿನ್ ಭಾಷೆಯ ಶೋಕಗೀತೆಗಳಲ್ಲಿ ಇದೇ ಮಾದರಿ ಕಂಡು ಬರುತ್ತದೆ. ಇಲ್ಲಿನ ಅನೇಕ ಪದ್ಯಗಳಲ್ಲಿ ಆ ಕಾಲದ ತಮಿಳು ರಚನೆಯ ಲಕ್ಷಣದ ಒಂದು ಸೌಂದರ್ಯವಿದೆ. ಅದು ಪ್ರೊಪರ್ಷಿಯಸ್ಸಿನ ಹಿತಕರವಾದ ಪ್ರಯತ್ನಗಳನ್ನು ನೆನಪಿಗೆ ತರುತ್ತದೆ.

ಸೂಕ್ಷ್ಮಗ್ರಾಹಕ ದೃಷ್ಟಿಯುಳ್ಳ ವಿಮರ್ಶಕ ರೆವರೆಂಡ್ ಪರ್ಸಿವಾಲ್ ಹೀಗೆ ಉದ್ಘೋಷಿಸಿರುತ್ತಾರೆ: "ಕವಿಯಾಗಿ ದ್ವಿಪದಿಗಳ ಮೂಲಕ ತಾನು ವಿವೇಕದ ಪಾಠಗಳನ್ನು ಹೇಳುವಾಗ ವ್ಯಕ್ತವಾಗುವ ಶಕ್ತಿ ಮತ್ತು ಸಂಕ್ಷಿಪ್ತ ಗುಣಗಳನ್ನು ಸರಿಗಟ್ಟುವಂಥದು, ಸಮಗ್ರ ಮಾನವ ಭಾಷೆಯ ಪರಿಮಿತಿಯಲ್ಲಿ ನಿಶ್ಚಯವಾಗಿ ಕಾಣಸಿಗುವುದಿಲ್ಲ."

ಇದರಿಂದ ಅತಿ ಹೆಚ್ಚು ಭಾಷಾಂತರಗಳನ್ನು ಕಂಡಿರುವ ಕೃತಿ ತಿರುಕ್ಕುರಳೆಂದರೆ ಆಶ್ಚರ್ಯಪಡಬೇಕಾಗಿಲ್ಲ. ಲ್ಯಾಟಿನ್, ಜರ್ಮನ್, ಫ್ರೆಂಚ್, ಡಚ್, ಫಿನ್ನಿಷ್, ಪೋಲಿಷ್, ರಷ್ಯನ್, ಚೀನೀ, ಫಿಜಿ, ಮಲಯ ಮತ್ತು ಬರ್ಮಾ ಭಾಷೆಗಳಲ್ಲಿ ಅನುವಾದವಾಗಿರುವುದು ಮಾತ್ರವಲ್ಲದೆ ಸಂಸ್ಕೃತ, ಉರ್ದು, ಮರಾಠಿ, ಬಂಗಾಳಿ, ಹಿಂದಿ, ತೆಲುಗು, ಮಲಯಾಳ ಮತ್ತು (ಕನ್ನಡ ಭಾಷೆಗಳಲ್ಲಿ ಕೂಡಾ) ಇದರ ಅನುವಾದಗಳು ಲಭ್ಯವಾಗಿವೆ. ವಿದೇಶೀ ಭಾಷೆಗಳಲ್ಲಿ ತಿರುಕ್ಕುರಳಿನ ಸುಮಾರು 82 ಅನುವಾದಗಳು ಬೆಳಕು ಕಂಡಿವೆ.

ಸುಮಾರು ಎರಡು ಸಾವಿರ ವರ್ಷಗಳಿಗೂ ಮೀರಿ ತಿರುವಳ್ಳುವರ ಚಿಂತನೆಗಳು, ತಮಿಳು ಬೌದ್ಧಿಕ ಕ್ಷೇತ್ರವನ್ನು ವ್ಯಾಪಿಸಿಕೊಂಡಿವೆ. ತಮಿಳು ಜನರು ತಿರುಕ್ಕುರಳನ್ನು 'ತಮಿಳು ವೇದ'ವೆಂದು ಗೌರವದಿಂದ ಕಾಣುತ್ತಾರೆ. 'ತಿರುವಳ್ಳುವರ್ ಮಾಲೈ' ಎನ್ನುವುದು ಭಾಗಶಃ ತಿರುವಳ್ಳುವರ ಸಮಕಾಲೀನ ಕವಿಗಳೂ ಭಾಗಶಃ ಅವರ ತರುವಾಯ ಬಂದವರೂ ಹಾಡಿದ ಸ್ತುತಿಗೀತೆಗಳನ್ನೊಳಗೊಂಡ ಒಂದು ಸಂಕಲನ ಗ್ರಂಥ. ಅದರಲ್ಲಿ ತಿರುವಳ್ಳುವರ ಸಮಕಾಲೀನರಾಗಿದ್ದಿರಬಹುದಾದ ಕಪಿಲರು ಹೀಗೆ ಹಾಡಿದ್ದಾರೆ:

ಕಾಳಿನಳತೆಯ ಕಿರು ನೀರ ಹನಿಯೊಂದು
ತಾಳೆ ಮರದೆತ್ತರವ ಪ್ರತಿಫಲಿಸುವುದು

ತಿರುಕುರಳಿನ ಪ್ರತಿಫಲನ ಶಕ್ತಿಯು
ಅದರ ವೈಶಾಲ್ಯಕೆಣೆಯೆನಿಪುದು.

ಮತ್ತೊಬ್ಬ ಕವಿ ಪರಣರ್ ಹೇಳುತ್ತಾರೆ:

ವಾಮನನಾಗಿ ಬಂದ ವಿಷ್ಣು
ತ್ರಿವಿಕ್ರಮನಾಗಿ ಬೆಳೆದು
ತನ್ನೆರಡು ಬೃಹತ್ಪಾದಗಳಿಂ
ವಿಶ್ವವನೆ ಅಳೆದ ರೀತಿ
ಮಹಾಪುರುಷ ವಳ್ಳುವರು
ಕುರಳಿನ ಎರಡು ಪಾದಗಳಿಂ
ಮಾನವನ ಮನೋನಭದಿ
ಚಲಿಸಿದ ಎಲ್ಲ ಚಿಂತೆಗಳನು
ಅಳೆದರು.

ಗೋತಮನಾರ್ ಹೇಳಿದ ರೀತಿ ಇದು:

ಪಾಮರರೋದಿ ಬಲವಳಿವುದೆಂದು ಭೂಸುರರು
ಚತುರ್ವೇದಗಳ ಓಲೆಗಳಲಿ ಬರೆಯದಿಹರು
ವಳ್ಳುವರು ಓಲೆಗರಿಗಳಲಿ ಕೊರೆದಿಟ್ಟ ಕುರಳು
ಪಂಡಿತರು ಪಾಮರರು ಗ್ರಹಿಸಿ ಹಾಡಿದರು
ಬಲವಳಿಯದದು ಅಮರವಾಗಿಹುದು.

ಮಾಗುಂಡಿ ಮುರದನಾರ್ ತಮ್ಮ ಕವಿತೆಯಲ್ಲಿ:

ಓದಲು ಸುಲಭವೆನಿಸಿ, ಗ್ರಹಿಸುವುದಕ್ಕರಿದೆನಿಸಿ
ವೇದದ ಹುರುಳೆನಿಸಿ ಕೇಡೆಣಿಸಿದವರಿಗೆ
ಬೆಳಕಾಗಿ, ಹೃದಯ ಮನಸುಗಳ ಕರಗಿಸಿ
ನೀರಾಗಿಸುವುದು, ವಳ್ಳುವರ ಮಾತಿನ ಹಿರಿಮೆಯು !

ವಣ್ಣಕ್ಕಮ್ ಶಾತ್ತನಾರ್:

ಸಂಸ್ಕೃತ ಹಿರಿದೆ, ಶೆಂದಮಿಳು ಹಿರಿದೆ ಎಂದು
ನಿರ್ಧರಿಸಿ ಹೇಳುವುದದು ಅರಿದು
ಶೋಧಿಸಿ ತಿಳಿಯೆ

ವೇದದಿಂ ಸಂಸ್ಕೃತದ ಹಿರಿಮೆ, ವಳ್ಳುವರ
ತಿರುಕ್ಕುರಳಿಂ, ತಮಿಳಿನ ಗರಿಮೆ ಬೆಳಗಿಹುದು.

ಅವ್ವೈಯಾರ್:

(ದೈವಿಕ ಕವಿ ವಳ್ಳುವರ್)

ಇಂದು ಮಾನವ ಹೃದಯದ ಇರುಳ
ಕಳೆದು ಗೈಯುತಿಹ ಸೇವೆಯಿಂ
ಪರಮ ಸತ್ಯದ ದೀವಟಿಗೆಯು
ಎಂದೆಂದು ಬೆಳಗುತಿರಲಿ.

ತೇಣಿಕುಡಿ ಕೀರನಾರ್ ತಮ್ಮೊಂದು ಅಪೂರ್ವ ಗೀತೆಯಲ್ಲಿ ತಿರುವಳ್ಳುವರ ಚಿಂತನೆಗಳು ಅವರ ಸಮಕಾಲೀನರ ಮೇಲೆ ಹೇಗೆ ಪರಿಣಾಮವುಂಟುಮಾಡಿವೆ ಯೆಂಬುದನ್ನು ವಿವರಿಸಿದ್ದಾರೆ. ವೈಚಾರಿಕ ವಿಷಮತೆಯ ವಾತಾವರಣದಲ್ಲಿ ಒಳ ಭೇದಗಳ ಸೆಣಸಾಟದಿಂದ ಜನರು ಸುಳ್ಳನ್ನು ಸತ್ಯವೆಂದು ನಂಬುವ ಗೊಂದಲವು ಏರ್ಪಟ್ಟ ಕಾಲದಲ್ಲಿ ತಿರುವಳ್ಳುವರು ಬದುಕಿದ್ದರೆಂಬುದು ಸರ್ವವಿದಿತ. ಅವರು ಅಸತ್ಯದ ಮುಖವು ಹಾಕಿಕೊಂಡಿದ್ದ ಸತ್ಯದ ಮುಖವಾಡವನ್ನು ಕಿತ್ತೆಸೆದು ಸಮ ಕಾಲೀನ ಜನರಿಗೆ ಅದು ಸುಳ್ಳು ಎಂಬುದನ್ನು ಮಾರ್ಮಿಕವಾಗಿ ಬಯಲು ಮಾಡಿ ದರು. ಸುಳ್ಳಿನ ಆಕ್ರಮಣಕ್ಕೆ ತುತ್ತಾಗಿ, ಧೂಳಿನಲ್ಲಿ ಬೆರೆತು, ಕಡೆಗಣಿಸಲಾಗಿದ್ದ ಸತ್ಯವನ್ನು ಮೇಲೆತ್ತಿ ಪುನಃ ಪ್ರತಿಷ್ಠಾಪಿಸಿದರು. ಅವರು ಮಾಡಿದ ಈ ಮಾರ್ಪಾ ಡನ್ನು ತೇನಕುಡಿ ಕೀರನರು ತಮ್ಮ ಒಂದು ಗೀತೆಯಲ್ಲಿ ಉಲ್ಲೇಖಿಸಿದ್ದಾರೆ. ಅದನ್ನು ಹೀಗೆ ಅನುವಾದಿಸಬಹುದು:

ತ್ರಿವರ್ಗಗಳು ದೈವ ತಿರುವಳ್ಳುವರು ಪೇಳ್ದ ಕುರಳಿಂ
ಲೋಕದಲುಜ್ಜೀವಿಸುವ ಜನರ ಮನಸಿನಲಿ
ಹುಸಿಯೆನಿಸಿದುದೆಲ್ಲ ಹುಸಿಯಾಗಿ ಹೋಯಿತು
ಹುಸಿಯಲ್ಲದ ಹುರುಳೆಲ್ಲ ನಿಜವಾಯಿತು.

ಕ್ರಿ. ಶ. ಒಂದನೆಯ ಶತಮಾನದ ಕೊನೆಯವರೆಗೆ, ಮುನ್ನೂರು ವರ್ಷಗಳ ಅವಧಿಯಲ್ಲಿ ಬಂದ ಸಂಗಕಾವ್ಯಗಳಲ್ಲಿ ತಿರುಕ್ಕುರಳನ್ನು ತುಂಬು ಗೌರವದಿಂದ ಉದ್ಧರಿಸಲಾಗಿದೆ ಮತ್ತು ಅಂಗೀಕರಿಸಲಾಗಿದೆ. ಕ್ರಿ. ಶ. 9ನೆಯ ಶತಮಾನದ ಕವಿ ಶ್ರೇಷ್ಠ, ಮಹಾಕವಿ ಕಂಬರ್, ತಿರುಕ್ಕುರಳಿನ ಚಿಂತನೆಗಳನ್ನು ಅರಗಿಸಿಕೊಂಡು ತಮ್ಮ ಕಾವ್ಯಶಿಲ್ಪದಲ್ಲಿ ಅವುಗಳನ್ನು ಸ್ವಪ್ರಭಾವ ಸಮೇತವಾಗಿ ಹೆಣೆದುಕೊಟ್ಟಿದ್ದಾರೆ. ಇಪ್ಪತ್ತನೆಯ ಶತಮಾನದ ಕವಿಗಳೂ ಸೇರಿ, ತಮಿಳಿನ ಅನೇಕ ಪ್ರಮುಖ ಕವಿಗಳು

ತಮ್ಮ ಅನೇಕ ಗೀತೆಗಳಲ್ಲಿ ಹಲ ವಿಧಗಳಲ್ಲಿ ತಮ್ಮ ಋಣಭಾರವನ್ನು ಸ್ಮರಿಸಿ, ತಿರುವಳ್ಳುವರನ್ನು ಕೊಂಡಾಡಿದ್ದಾರೆ. ತಿರುಕ್ಕುರಳ್ ತಮಿಳು ಜನರ ಚಿಂತನೆಯಲ್ಲಿ ಎಷ್ಟು ಆಳವಾಗಿ ಬೇರೂರಿದೆಯೆಂದರೆ, ಅನಕ್ಷರಸ್ಥನೂ ಕುರಳನ್ನು ಉದಾಹರಿಸುವುದನ್ನು ನಾವು ಕೇಳಬಹುದು. ನಮ್ಮ ತಮಿಳುನಾಡಿನ ಹಿಂದಿನ ಮುಖ್ಯಮಂತ್ರಿಗಳಾದ ಡಾ. ಸಿ. ಎನ್. ಅಣ್ಣಾದುರೈ ಅವರು ತಿರುಕ್ಕುರಳಿನ ಆಯ್ದ ವಚನಗಳನ್ನು ರಾಷ್ಟ್ರೀಕೃತ ಸರ್ಕಾರಿ ಬಸ್ಸುಗಳ ಫಲಕದಲ್ಲಿ ಬರೆಯಬೇಕೆಂದು ಆದೇಶ ಹೊರಡಿಸಿದ ಸಮಯದಲ್ಲಿ ತಮಿಳುನಾಡಿನ ವಿಧಾನ ಸಭೆಯ ಸದಸ್ಯರೊಬ್ಬರು, ವ್ಯಂಗ್ಯವಾಗಿ "ಕುರಳನ್ನು ಬಸ್ಸಿನಲ್ಲಿ ಯಾರ ಉದ್ಧಾರಕ್ಕಾಗಿ ಪ್ರದರ್ಶಿಸುತ್ತಿದ್ದೀರಿ? ಬಸ್ಸುಗಳ ಸಿಬ್ಬಂದಿಗಳಿಗಾಗಿಯೋ ಅಥವಾ ಪ್ರಯಾಣಿಕರಿಗಾಗಿಯೋ" ಎಂದು ಕೇಳಿದರು. ಡಾ. ಅಣ್ಣಾದುರೈ ಒಡನೆಯೇ "ಕಣ್ಣಿದ್ದವರೆಲ್ಲರ ಪ್ರಯೋಜನಕ್ಕಾಗಿ" ಎಂದು ಪ್ರತಿಕ್ರಿಯೆ ವ್ಯಕ್ತಪಡಿಸಿದರು. ಭಾರತದ ಹೊರಗೆ ವಿದೇಶದಲ್ಲಿ ಅತಿ ಪ್ರಾಚೀನವಾಗಿ ತಿರುಕ್ಕುರಳ್ ಪ್ರಯೋಗವಾಗಿರುವ ಉಲ್ಲೇಖದ ಕಡೆಗೆ ಡಾ। ಕ್ಸೇವಿಯರ್, ಎಸ್. ತನಿನಾಯಗಂ ನಮ್ಮ ಗಮನ ಸೆಳೆದಿದ್ದಾರೆ. ಅದು ಫರ್ನಾವೊ ಡಿ.ಕ್ವಿರೋಜ್ ಅವರ 'ಕಾನ್‌ಕ್ವೆಸ್ಟ್ ಆಫ್ ಸಿಲೋನ್' ಎಂಬ ಗ್ರಂಥದಲ್ಲಿ ಲಭ್ಯವಾಗಿದೆ. ಅದರಲ್ಲಿ ಸಿಂಹಳದ ಕೊಟ್ಟೆಯ ಅರಸು ಭುವನೈಕಬಾಹುವಿನ (1521–1551) ಆಸ್ಥಾನದಲ್ಲಿ ಮತ ಸಂಬಂಧವಾದ ಚರ್ಚೆಯಲ್ಲಿ ಫ್ರಾನ್ಸಿಸ್ಕನ್ ಮತಪ್ರಚಾರ್ಯನಾದ ಫ್ರಾ ಜೋಮ್ ಡಿ. ವಿಲಾ ಕೊಂಡೆ ಎಂಬ ಮಹಾಶಯನು ತನ್ನ ಮತ ತತ್ವ ಬೋಧನೆಗಳಿಗೆ ಬೆಂಬಲವಾಗಿ ತಿರುಕ್ಕುರಳನ್ನು ಉದಾಹರಿಸಿದ್ದಾನೆ. "ನೀವು ಮತ್ಸರದಿಂದ ಮುಚ್ಚಿಟ್ಟಿರುವ ಮೈಲಾಪುರದ ವಾಸಿ, ಸೈಂಟ್ ಥಾಮಸನ ಸಮಕಾಲೀನ ತಿರುವಳ್ಳುವರು ರಚಿಸಿದ ಗ್ರಂಥವೊಂದನ್ನು ತೆಗೆದು ಓದಿರಿ. ಅದರಲ್ಲಿ ತ್ರಿತ್ವ (Trinity)ದ ಐಕ್ಯತೆಯನ್ನು ಕುರಿತು ನೀವು ಅರಿಯಬಹುದು. ದೇವಪುತ್ರನ ಅವತಾರ, ಮಾನವನ ಮುಕ್ತಿ, ಅವನ ಅಧಃಪತನದ ಕಾರಣ, ಅವನು ಮಾಡಿದ ತಪ್ಪುಗಳಿಗೆ ದುಃಖಗಳಿಗೆ ಪರಿಹಾರ, ಅಂತಿಮವಾಗಿ ಅವನ....ರಕ್ಷಣೆ-ಇವುಗಳ ಬಗ್ಗೆ ನೀವು ತಿಳಿಯಬಹುದು." ಮೇಲಿನ ಈ ಉದಾಹರಣೆಯಿಂದ ಪೋರ್ತುಗೀಸ್ ಮತ ಪ್ರಚಾರಕ ಜೋಮ್ ಡಿ ವಿಲಾಕೊಂಡೆಯ ಗಮನವನ್ನು ಸೆಳೆದುಕೊಳ್ಳುವಷ್ಟು ತಿರುಕ್ಕುರಳ್ ಸಿಂಹಳದಲ್ಲಿ ಜನಪ್ರಿಯತೆಯನ್ನು ಗಳಿಸಿತ್ತು ಎಂದು ನಮಗೆ ವ್ಯಕ್ತವಾಗುತ್ತದೆ.





# 4. ತಿರುವಳ್ಳುವರ ವ್ಯಕ್ತಿತ್ವ

ತಿರುವಳ್ಳುವರ ವ್ಯಕ್ತಿತ್ವವನ್ನು ನಾವು ಪುನರ್ರಚಿಸಲು ಅವರ ಸಮಕಾಲೀನವಾದ ದಾಖಲೆಯಾವುದೂ ದೊರೆತಿಲ್ಲ. ಆದರೆ ಹಲವಾರು ತಲೆಮಾರುಗಳಿಂದ ಪರಂಪರಾನುಗತಿಕವಾಗಿ ಪ್ರಚಲಿತವಾಗಿರುವ ಅವರನ್ನು ಕುರಿತ ಸಾಕಷ್ಟು ಐತಿಹ್ಯಗಳು ಉಳಿದು ಬಂದಿವೆ. ಅಲ್ಲದೆ ಅವರ ಕೃತಿಯಾದ ತಿರುಕ್ಕುರಳಿನಲ್ಲಿಯೇ ಆಂತರಿಕವಾಗಿ ಕಾಣಬರುವ ಸಾಕ್ಷ್ಯದ ಮೂಲಕ ತಿರುವಳ್ಳುವರು ಹೇಗಿದ್ದರು ಎಂಬುದನ್ನು ಯಾರಾದರೂ ರೂಪಿಸಿಕೊಳ್ಳಲು ನೆರವಾಗುತ್ತವೆ.

ಐತಿಹ್ಯದ ಪ್ರಕಾರ ತಿರುವಳ್ಳುವರು ವೃತ್ತಿಯಲ್ಲಿ ನೇಕಾರರಾಗಿದ್ದರು. ವಳ್ಳುವರ್ ಎಂಬುದು ಒಂದು ಜಾತಿಯ ಬಿರುದು. ಅವರು ಭವಿಷ್ಯಜ್ಞರಾಗಿಯೊ ಅರ್ಚಕರಾಗಿಯೊ ಇದ್ದುದಲ್ಲದೆ ಆನೆಗಳ ಮೇಲೇರಿ ಕುಳಿತು ರಾಜಘೋಷಣೆಗಳನ್ನು ಸಾರಿ ಹೇಳುತ್ತಿದ್ದರು. 'ವಳ್ಳುವರ್' ಹಿಂದೆ ಪ್ರಯೋಗವಾಗಿರುವ "ತಿರು" ಎಂಬ ಉಪಸರ್ಗ ತಮಿಳಿನಲ್ಲಿ ಯಾವುದಾದರೂ ಪವಿತ್ರವಾದುದನ್ನು ಸೂಚಿಸುತ್ತದೆ. ಎಂದರೆ ವಳ್ಳುವ ಜಾತಿಗೆ ಸೇರಿದ ಪೂಜಾರ್ಹ ವ್ಯಕ್ತಿ ಎಂದು ಅರ್ಥ. ತಿರುಕ್ಕುರಳ್ ಎಂದರೆ 'ಪವಿತ್ರ ದ್ವಿಪದಿ.' ಈ ಎರಡು ಶಬ್ದಗಳೂ ಅಂಕಿತನಾಮಪದಗಳಲ್ಲ. ಫ್ರೆಂಚ್ ಗ್ರಂಥಕರ್ತನೊಬ್ಬನು ಈ ಅಸಾಂಗತ್ಯವನ್ನು ಗಮನಿಸಿ "ಇದೊಂದು ಅನಾಮಧೇಯ ಕರ್ತೃವಿನ ಅನಾಮಿಕ ಗ್ರಂಥ" ಎಂದು ಹೇಳಿದ್ದಾನೆ.

ತಿರುವಳ್ಳುವರು ಈಗಿನ ಮದರಾಸು ನಗರದ ಭಾಗವಾಗಿರುವ ಮೈಲಾಪುರದಲ್ಲಿ (ಮಯಿಲಾಪುರಂ-ನವಿಲುಗಳ ನಗರ) ನೆಲೆಸಿದ್ದರೆಂದು ಖಚಿತವಾಗಿ ಒಪ್ಪಿಕೊಳ್ಳಬಹುದು. ಏಕೆಂದರೆ ವಳ್ಳುವರ ಸ್ಮರಣೆಗೆ ಸಮರ್ಪಿತವಾದ ದೇವಾಲಯವೊಂದು ಮೈಲಾಪುರದಲ್ಲಿರುವುದನ್ನು ಬಿಟ್ಟರೆ ತಮಿಳುನಾಡಿನ ಬೇರೆಲ್ಲೂ ಇಲ್ಲ. ಈ ದೇವಾಲಯದ ಸಮೀಪದಲ್ಲೇ ಕವಿ ವಾಸಿಸುತ್ತಿದ್ದ ಮನೆಯೂ ಇದ್ದಿರಬಹುದೆಂದು ನಾವು ಕಲ್ಪಿಸಿಕೊಳ್ಳಬಹುದು. ರೆವರೆಂಡ್ ಜಿ. ಯು. ಪೋಪ್ ಅವರು ಭಾವಿಸುವಂತೆ " ಆ ಮನೆಯ ಸುತ್ತ ಮುತ್ತಲೂ ಇಂದಿಗೂ ಅಪೂರ್ವವಾದ, ಪ್ರಾಚೀನವಾದ ಸೌಂದರ್ಯವು ಬಳಸಿಕೊಂಡಂತಿದೆ. ಕಾಲಕಾಲದಿಂದ ಜೀವ ಉಳಿಸಿಕೊಂಡು ಉಳಿದಿದೆ". ಆ ದಾರಿಯಲ್ಲಿ ಹಾದು ಹೋಗುವವನೊಬ್ಬನು ಮಗ್ಗದ ಲಾಳಿಯ ಚಕಮಕಿಯ ಶಬ್ದವೂ ತಿರುವಳ್ಳುವರು ಮೆಲ್ಲಗೆ ಹಾಡಿಕೊಳ್ಳುತ್ತಿದ್ದ ಮಧುರವಾದ ಪದಗಳೂ ಬೆರೆತು ಬರವುದನ್ನು ಕೇಳಿದಂದಿನಿಂದ ಆ ಸೌಂದರ್ಯವು ಬಹುಶ

ಬದಲಾವಣೆಯಾಗಿರಬಹುದು. ಸಾಲುಗಟ್ಟಿರುವ ತೆಂಗಿನ ಮರಗಳಿಂದಲೂ ಅದರ ರಿಗಳಿಂದ ಮಾಡು ಹೊದೆಸಿದ ಮನೆಗಳಿಂದಲೂ ಸುತ್ತುವರಿದ ಪವಿತ್ರ ಕೆರೆಯೊಂದು ಈಗಲೂ ಇದೆ. ಈ ಮನೆಗಳಲ್ಲಿ ಯಾವುದಾದರೂ ಒಂದರಲ್ಲಿ ಈ ಕವಿ ವಾಸಿಸು ತ್ತಿದ್ದಿರಬಹುದು.

ಮೈಲಾಪುರದ ಸನಿಹದಲ್ಲಿಯೇ ಕಡಲ ತೀರವೂ ಇದೆ. ತಿರುವಳ್ಳುವರ್, ಗ್ರೀಕ್, ರೋಮನ್, ಬೌದ್ಧ, ಜೈನ, ವೈದಿಕ, ವೈಷ್ಣವ ಮತ್ತು ಶೈವ ತತ್ವಜ್ಞಾನಿ ಗಳೊಂದಿಗೆ, ಕೈ ಕೈಹಿಡಿದು ಆ ಕಡಲ ತೀರದಲ್ಲಿ ವಿಹರಿಸುತ್ತ ಜೀವನದ ಪಾರಮಾರ್ಥಿಕ ಸತ್ಯಗಳನ್ನು ಬದುಕಿನ ಕಲೆಯ ಸೂಕ್ಷ್ಮಾತಿ ಸೂಕ್ಷ್ಮಗಳನ್ನು ಕುರಿತು ಚರ್ಚಿಸಿದುದನ್ನು ನಾವು ಊಹಿಸಿಕೊಳ್ಳಬಹುದು. ದೇಶ ವಿದೇಶಗಳ ಪಂಡಿತರು, ಋಷಿಗಳು, ತಿರುವಳ್ಳುವರನ್ನು ಕಂಡು ಅವರೊಡನೆ ತಂಗಿ ತುಸು ದೂರದ ಕಡಲಿನಲ್ಲಿ ಅವರೊಡನೆ ಮಾತುಕತೆಯಾಡುತ್ತ, ಸ್ನಾನ ಮಾಡುತ್ತ ಅವರ ಮನೆಯ ಜಗುಲಿ ಯೇರಿ ಕುಳಿತು ವಳ್ಳುವರ ಪತ್ನಿ ವಾಸುಕಿಯು ಉಣಬಡಿಸಿದ ಸರಳವೂ ಪುಷ್ಟಿ ದಾಯಕವೂ ಆದ ಆಹಾರವನ್ನು ಸವಿದಿರಬಹುದು. ಸ್ನೇಹವನ್ನು ಬೆಳೆಸುವುದರಲ್ಲಿ ಅವರು ನಿಪುಣರಾಗಿದ್ದರು. ಅವರಲ್ಲಿ ಇಳಿದುಕೊಂಡಿದ್ದ ಪ್ರತಿಭಾಶಾಲಿಗಳು ಹೊರಟುಹೋದ ಬಳಿಕ, ಕೆಲವು ದಿನಗಳವರೆಗೆ ಅವರಿಗೆ ಅಪಾರ ಯಾತನೆಯಾಗು ತ್ತಿತ್ತು....ಒಂದು ದಿನ ಅವರು ಸ್ನೇಹಿತರನ್ನು ಬೀಳ್ಕೊಟ್ಟ ಮೇಲೆ ದೂರದ ಮಸುಕಿ ನಲ್ಲಿ ಕಣ್ಮರೆಯಾಗುವ ವರೆಗೂ ಬೀದಿಯ ಮೂಲೆಯೊಂದರಲ್ಲಿ ನಿಂತಿದ್ದು, ವಳ್ಳುವರು ಭಾರವಾದ ಹೃದಯದಿಂದ ಹಿಂತಿರುಗಿ, ತಮ್ಮ ಜಗುಲಿಯ ಮೇಲೆ ಕುಳಿತು ತಮ್ಮ ಮಿತ್ರರ ಅಗಲಿಕೆಗಾಗಿ ಚಿಂತಾಗ್ರಸ್ತರಾಗಿದ್ದರು. ಆಗ ಅವರು ವಿನೋದ ಪರವಶರಾಗಿ, ಸ್ನೇಹ ಬೆಳೆಸದಿರುವುದು ಲೇಸೆಂದು ತೀರ್ಮಾನಿಸಿದರು. ಅಂದರೆ ಸುಸಂಸ್ಕೃತರನ್ನೂ ಜ್ಞಾನಿಗಳನ್ನೂ ತೊರೆಯಬೇಕೆಂದಲ್ಲ; ಬೆಪ್ಪರು ಮತ್ತು ಮೂರ್ಖರನ್ನು ಮಾತ್ರ ದೂರವಿಡಲು ಬಯಸಿದರು. ಕುರಳಿನ ಪದ್ಯವೊಂದರಲ್ಲಿ ತಮ್ಮ ತೀರ್ಮಾನವನ್ನು ಅನುಮೋದಿಸಿ ಈ ಕೆಳಗೆ ಕಂಡಂತೆ ಬರೆದಿದ್ದಾರೆ :

ಅಲ್ಪರೊಡನಾಟ, ಸ್ನೇಹ ಅತಿ ಮಧುರ
ಅಗಲಿಕೆಯಲಿ, ದುಃಖ ಸಂಕಟಗಳನು ಅದು
ತರುವುದಿಲ್ಲವಾಗಿ (839)

ಮಾರ್ಗ ಸಹಾಯಮ್, ವಳ್ಳುವರ ಸರಳ ಜೀವನ ಮತ್ತು ಉನ್ನತ ಭಾವನೆ ಗಳಿಗೆ ಮಾರುಹೋದರು. ಆದ್ದರಿಂದ ತಮ್ಮ ಮಗಳು ವಾಸುಕಿಯನ್ನು ವಿವಾಹ ವಾಗಬೇಕೆಂದು ವಳ್ಳುವರಲ್ಲಿ ಕೇಳಿಕೊಂಡರು. ತಿರುವಳ್ಳುವರು ವಾಸುಕಿಯನ್ನು ವಿವಾಹವಾಗಲು ಒಲವು ತೋರಿದರೂ ಅವಳ ಸಹನೆಯನ್ನು ಪರೀಕ್ಷೆ ಮಾಡಲು

ಇಚ್ಛಿಸಿದರು. ಮಾರ್ಗಸಹಾಯಮ್‌ರ ಬಳಿ "ವಾಸುಕಿಯು ಮಳಲಷ್ಟನ್ನು ತೆಗೆದು ಕೊಂಡು ಅದನ್ನು ಕುದಿಸಿ ನನಗೆ ಅನ್ನವನ್ನು ಮಾಡಿ ಬಡಿಸಿದರೆ ಅವಳನ್ನು ಪತ್ನಿ ಯಾಗಿ ಸ್ವೀಕರಿಸುತ್ತೇನೆ" ಎಂದರು. ವಾಸುಕಿ ಯಾವೊಂದು ಉತ್ತರವನ್ನೂ ಕೊಡದೆ ತನಗೆ ಕೊಟ್ಟ ಬುಟ್ಟಿಯ ಮಳಲನ್ನು ತೆಗೆದುಕೊಂಡು ಈ ಮಹಾಪುರುಷನ ಆಸೆಯು ಫಲಿಸಿಯೇ ಫಲಿಸುತ್ತದೆ ಎಂಬ ದೃಢನಿರ್ಧಾರದಿಂದ ಅದನ್ನು ಒಲೆಯ ಮೇಲಿಟ್ಟು ಬೇಯಿಸತೊಡಗಿದಳು. ಅವಳ ಪರವಾಗಿ ಒಂದು ಪವಾಡವೇ ನಡೆದು ಹೋಯಿತು. ಆಕೆ ಬೇಯಿಸಿದ ಮರಳನ್ನು ತರುತ್ತಿರಲು ವಳ್ಳುವರ ಇಚ್ಛೆಯಂತೆ ಅದು ಅನ್ನವಾಗಿ ಮಾರ್ಪಟ್ಟಿತು. ಒಡನೆಯೇ ವಳ್ಳುವರು ಅವಳನ್ನು ಧರ್ಮಪತ್ನಿ ಯಾಗಿ ಒಪ್ಪಿಕೊಂಡು ಅವಳೊಡನೆ ಸುಖ ನೆಮ್ಮದಿಗಳಿಂದ ಬಾಳಿದರು.

ಅವರ ದಾಂಪತ್ಯ ಜೀವನವು ಕುರಳಿನಲ್ಲಿ ಭವ್ಯವಾಗಿ ಹೇಳಿರುವ ಗೃಹಸ್ಥ ಧರ್ಮದ ಗುಣಗಳಿಗೆಲ್ಲ ಸಾಕಾರವೆಂಬಂತಿತ್ತು. ತಿರುಕ್ಕುರಳಿನ ಪ್ರಕಾರ ಆದರ್ಶ ಗೃಹಸ್ಥನು ಈ ಲೋಕದಲ್ಲಿ ಸಮರ್ಪಣಾ ಭಾವದಿಂದ ಬದುಕುತ್ತಾನೆ. ಬದುಕಿ ದ್ದವರ ಮತ್ತು ಸತ್ತವರ ಬಗ್ಗೆ ತನ್ನ ಕರ್ತವ್ಯಗಳನ್ನು ನಿರ್ವಹಿಸಲು ಅತ್ಯಂತ ಉತ್ಸುಕನಾಗಿರುತ್ತಾನೆ. ಆತನ ಪತ್ನಿಯಾದವಳು ಅವನ ಬಾಳಿನ ಅರ್ಧಾಂಗಿಯಾಗಿ ಅವನ ಕೀರ್ತಿಗೆಲ್ಲ ಕಾರಣಳಾದವಳು, ವಿನಯಶೀಲಳಾಗಿ ಮಿತವ್ಯಯದಿಂದ ಜೀವನ ನಡೆಸುತ್ತಾಳೆ. ತನ್ನ ಪತಿಯನ್ನು ದೈವವೆಂದು ಗೌರವಿಸುತ್ತ ತನ್ನ ಶೀಲವನ್ನು ಜಾಗರೂಕತೆಯಿಂದ ರಕ್ಷಿಸಿಕೊಳ್ಳುತ್ತಾಳೆ.

ಸ್ವಾಭಾವಿಕವಾಗಿ, ಈ ದಂಪತಿಗಳು ಸಾಕಷ್ಟು ಮಕ್ಕಳನ್ನು ಪಡೆದಿದ್ದು ಅವರನ್ನು ಮನೆಯ ಸಿರಿಯಂತೆ ಕಂಡರು. ಅವರ ಮುದ್ದುಮುದ್ದಾದ ಮಾತುಗಳು ತಂದೆ-ತಾಯಿಗಳಿಗೆ ಸಂಗೀತದಂತೆ ಆಪ್ಯಾಯಮಾನವಾಗಿದ್ದುವು, ಕೊಳಲು-ವೀಣೆಗಳ ಸ್ವರಕ್ಕಿಂತಲೂ ಅವು ಮಧುರವಾಗಿದ್ದವು. ತಿರುವಳ್ಳುವರು ಮಕ್ಕಳನ್ನು ಅತ್ಯಂತ ವಾತ್ಸಲ್ಯದಿಂದ ಕಂಡು ಅವರನ್ನು ಕುರಿತು ಹೀಗೆ ಹಾಡಿದ್ದಾರೆ:

ಮಕ್ಕಳ ಮೈಯ ಮುಟ್ಟೆ ಒಡಲಿಗೆ ತಂಪು
ಅವರ ಮಾತು ತೊದಲ ನುಡಿಯಾಲಿಪುದು ಕಿವಿಗಿಂಪು (65)

ಮಕ್ಕಳು ತಮ್ಮ ಪುಟ್ಟ ಬೆರಳುಗಳಲ್ಲಿ ಚೆಲ್ಲಾಡಿದ ಕೂಳು ತಂದೆ-ತಾಯಿಗಳಿಗೆ ಅಮೃತವಾಗಿ ಪರಿಣಮಿಸಿತು. ಕುಟುಂಬದಲ್ಲಿ ತಂದೆಯಾದವನ ಒಂದು ಗುರಿ ಯೆಂದರೆ ತನ್ನ ಮಕ್ಕಳನ್ನು ತನಗಿಂತಲೂ ಅರ್ಹರನ್ನಾಗಿ ಮಾಡುವುದು. ಅಭಿ ಮಾನವು ಕುಟುಂಬದಲ್ಲೆಲ್ಲಾ ವ್ಯಾಪಿಸಿತ್ತು.

ವಳ್ಳುವರ ಮನೆಯ ಬಾಗಿಲು ಅತಿಥಿಗಳಿಗೆ ಸದಾ ತೆರೆದಿರುತ್ತಿತ್ತು. ಅವರನ್ನು

ನಗುಮೊಗದೊಡನೆ ಸ್ವಾಗತಿಸಿ ಸವಿಮಾತುಗಳನ್ನಾಡುತ್ತ ತಮ್ಮ ಊಟದಲ್ಲಿ ಅವರೊಂದಿಗೆ ಭಾಗಿಯಾಗುತ್ತಿದ್ದರು. ಮಾತಿನಲ್ಲಿ ಸೌಜನ್ಯ, ಪ್ರತಿಯೊಂದು ಸಣ್ಣ ಉಪಕಾರಕ್ಕೂ ಹೃದಯತುಂಬಿದ ಕೃತಜ್ಞತಾಭಾವ. ತಮ್ಮ ದೈನಂದಿನ ವ್ಯವಹಾರ ಗಳಲ್ಲಿ ನ್ಯಾಯಪರತೆ ತಮಗಾದ ಪ್ರತಿಸ್ಪಂದನಗಳಲ್ಲಿ ಪ್ರತಿಯೊಂದರ ಮೇಲೂ ಪ್ರಭುತ್ವ, ತಾವು ಮಾಡುವ ಪ್ರತಿಯೊಂದು ಕೆಲಸದಲ್ಲಿಯೂ ಚುರುಕು, ಪವಿತ್ರತೆ, ತಾಳ್ಮೆ ಮತ್ತು ಸ್ಥೈರಣೆಯ ಮನೋಧರ್ಮ ಮೊದಲಾದುವು ನಿತ್ಯ ಜೀವನದಲ್ಲಿ ಎದ್ದುಕಾಣುತ್ತಿದ್ದುವು.

ಅವರ ಹೃದಯ ದ್ವೇಷಮುಕ್ತವಾಗಿತ್ತು. ತಮ್ಮ ಆಸೆ-ಆಕಾಂಕ್ಷೆಗಳಲ್ಲಿ ಅವರು ಮಿತವಾದಿಗಳೆನಿಸಿದ್ದರು. ಇತರರನ್ನು ಕುರಿತು ಕೆಡುನುಡಿಗಳನ್ನು ಆಡುತ್ತಲೆ ಇರಲಿಲ್ಲ. ವ್ಯರ್ಥಾಲಾಪದಿಂದ ದೂರವಿರುತ್ತಿದ್ದರು. ಕೇಡಿನ ಸ್ಪರ್ಶಕ್ಕೆ ಹೆದರುತ್ತಿದ್ದರು. ಪರೋಪಕಾರದಲ್ಲಿ ಅವರು ಉದಾರಿಗಳಾಗಿದ್ದರು. ವಳ್ಳುವರು ನಿರೂಪಿಸಿದ ಆದರ್ಶ ಗೃಹಸ್ಥನ ಚಿತ್ರವಿದು. ಐತಿಹ್ಯಗಳ ಪ್ರಕಾರ ಇದಕ್ಕೆ ವಳ್ಳುವರೇ ಆದರ್ಶಪ್ರಾಯರಾಗಿದ್ದರು.

ವಳ್ಳುವರು ವಿವಾಹವಾಗಿ ಹಲವು ವರ್ಷಗಳು ಕಳೆದ ಮೇಲೆ ಆಗಂತುಕ ನೊಬ್ಬನು ಅವರ ಬೀದಿಗೆ ಬಂದು "ಗೃಹಸ್ಥ ಜೀವನ ಇಲ್ಲವೇ ಸನ್ಯಾಸ ಜೀವನಗಳಲ್ಲಿ ಯಾವುದು ದೊಡ್ಡದು? ಎಂದು ಪ್ರಶ್ನಿಸಿದನು. ವಳ್ಳುವರು ಆ ಪ್ರಶ್ನೆಗೆ ಮರು ಮಾತಾಡಲಿಲ್ಲ. ಆದರೆ ಆ ಆಗಂತುಕನನ್ನು ಹಲವು ದಿನಗಳವರೆಗೆ ತಮ್ಮ ಅತಿಥಿ ಯಾಗಿ ನೋಡಿಕೊಂಡರು. ತಮ್ಮ ಗೃಹಸ್ಥ ಜೀವನವನ್ನು ನೋಡಿ ಅವನಾಗಿಯೇ ತನ್ನ ಪ್ರಶ್ನೆಗೆ ಉತ್ತರ ಕಂಡುಕೊಳ್ಳುವಂತೆ ಅವನಿಗೇ ಬಿಟ್ಟರು.

ಒಂದು ದಿನ ವಾಸುಕಿಯು ಬಾವಿಯಿಂದ ನೀರು ಸೇದುತ್ತಿರುವಾಗ ತಿರುವಳ್ಳು ವರು ಅವಳನ್ನು ತಟ್ಟನೆ ಕರೆದರು. ವಿಧೇಯಳಾದ ಆ ಪತ್ನಿ ತಾನು ಸೇದುತ್ತಿದ್ದ ನೀರಿನ ಕೊಡವನ್ನು ಅರ್ಧದಲ್ಲಿಯೇ ನೇಲುವಂತೆ ಬಿಟ್ಟು ಒಡನೆಯೇ ಓಡಿಬಂದಳು. ಆ ಕೊಡದ ಹಿಂದಿನ ಶಕ್ತಿಯು ಭೂಮಿಯ ಗುರುತ್ವಾಕರ್ಷಣ ಶಕ್ತಿಯ ನಿಯಮ ವನ್ನು ಧಿಕ್ಕರಿಸುವುದನ್ನು ಕಂಡು ಆ ಆಗಂತುಕನು ವಿಸ್ಮಯಗೊಂಡನು.

ಇನ್ನೊಂದು ದಿನ ವಾಸುಕಿಯು ತನ್ನ ಪತಿಗೆ ಬೆಳಗಿನ ಊಟಕ್ಕೆ ತಂಗಳನ್ನವನ್ನು ತಂದಿಡಲು ತಿರುವಳ್ಳುವರು ತಮ್ಮ ಕೈಬೆರಳುಗಳು ಸುಟ್ಟುಹೋದವೆಂದು ದೂರಿ ದರು. ವಾಸುಕಿ ವಾದ ಮಾಡಲಿಲ್ಲ. ಪತಿಯ ಮಾತನ್ನು ನಂಬಿ ಆ ತಂಗಳನ್ನ ವನ್ನು ಬೀಸಣಿಗೆಯಿಂದ ಆರಿಸತೊಡಗಿದಳು.

ಮತ್ತೊಂದು ದಿನ ಮಟಮಟ ಮಧ್ಯಾಹ್ನದ ಉರಿಬಿಸಿಲಿನಲ್ಲಿ ವಳ್ಳುವರು ತಮ್ಮ ಕೈಯಲ್ಲಿದ್ದ ಲಾಳಿಯನ್ನು ಕೆಳಕ್ಕೆ ಕೆಡವಿ ಅದನ್ನು ಹುಡುಕಲು ದೀಪವನ್ನು ತರುವಂತೆ ಹೆಂಡತಿಯನ್ನು ಕರೆದರು. ವಿಧೇಯಳಾದ ವಾಸುಕಿ ತಡಮಾಡದೆ ಕಂದೀಲನ್ನು ಹಚ್ಚಿ ಅವರಿಗಾಗಿ ತಂದಳು.

ಈ ಘಟನೆಗಳನ್ನೆಲ್ಲ ಗಮನಿಸುತ್ತಿದ್ದ ಆಗಂತುಕನು ತನ್ನ ಪ್ರಶ್ನೆಗೆ ನಿರ್ಧರವಾದ ಉತ್ತರವನ್ನು ಕಂಡುಕೊಂಡನು. ವಾಸುಕಿಯಂಥ ಹೆಂಡತಿಯು ದೊರೆತಿದ್ದೇ ಆದರೆ ಗೃಹಸ್ಥ ಜೀವನವೇ ಶ್ರೇಷ್ಠವಾದೀತು. ವಾಸುಕಿಗೆ ವ್ಯತಿರಿಕ್ತಳಾದ ಹೆಂಡತಿಯಿದ್ದರೆ ಸನ್ಯಾಸ ಜೀವನವೇ ಮೇಲು.

ವಳ್ಳುವರು ಮತ್ತು ವಾಸುಕಿ, ನಿಡುಗಾಲ ದಾಂಪತ್ಯ ಜೀವನವನ್ನು ನೆಮ್ಮದಿಯಾಗಿ ಕಳೆದರು. ವಾಸುಕಿಯ ಕೊನೆಯ ದಿನಗಳು ಹತ್ತಿರವಾಗುತ್ತಿದ್ದಂತೆ ಅವಳು ಪತಿಯನ್ನು ಬಹುಕಾಲದಿಂದಲೂ ಕೇಳಲು ಹಿಂಜರಿಯುತ್ತಿದ್ದ ಪ್ರಶ್ನೆಯೊಂದು ಅವಳನ್ನು ಬಾಧಿಸುತ್ತಿತ್ತು. ವಳ್ಳುವರು ಪ್ರೀತಿಯಿಂದ ಅವಳನ್ನು ಹುರಿದುಂಬಿಸಿ, ಪ್ರಶ್ನೆಯನ್ನು ಹಿಂತೆಗೆಯದೆ ಕೇಳುವಂತೆ ಹೇಳಿದರು. ಆಕೆ "ನಾವು ಮದುವೆಯಾದಂದಿನಿಂದಲೂ ನಿಮ್ಮ ಅಪ್ಪಣೆಗೆ ಅನುಸಾರವಾಗಿ, ನೀವು ಊಟ ಮಾಡಲೆಂದು ಎಲೆಯನ್ನು ಹಾಕುವಾಗ ಅದರ ಪಕ್ಕದಲ್ಲಿ ಒಂದು ಬಟ್ಟಲು ತುಂಬ ನೀರು ಮತ್ತು ಒಂದು ಸೂಜಿಯನ್ನು ಇಡುತ್ತ ಬಂದಿದ್ದೇನೆ. ಅದಕ್ಕೆ ಕಾರಣವೇನೆಂದು ಕೇಳಬಹುದೆ ?" ಎಂದಳು. "ನೀನು ಅನ್ನ ಬಡಿಸುವಾಗ ಅನ್ನದ ಅಗುಳು ಅಪ್ಪಿ ತಪ್ಪಿ ಹೊರಗೆ ಚೆಲ್ಲಿದರೆ ಅದನ್ನು ಸೂಜಿಯಲ್ಲಿ ತೆಗೆದುಕೊಂಡು ನೀರಲ್ಲಿ ತೊಳೆದು ಶುದ್ಧಿಪಡಿಸಲು ಒಂದು ಬಟ್ಟಲು ತುಂಬ ನೀರು ಮತ್ತು ಸೂಜಿ ಬೇಕಾಗಿತ್ತು. ಆದರೆ ನೀರು ಮತ್ತು ಸೂಜಿಯನ್ನು ಬಳಸುವ ಪ್ರಮೇಯವೇ ಬರಲಿಲ್ಲ-" ಎಂದು ಅವರು ಉತ್ತರವಿತ್ತರು. ತನ್ನ ಸಂದೇಹ ಪರಿಹಾರವಾದೊಡನೆಯೇ ವಾಸುಕಿ ತನ್ನ ಕೊನೆಯುಸಿರೆಳೆದಳು.

ಆಕೆ ಸತ್ತ ಬಳಿಕ ಆಕೆಯ ಶವಸಂಸ್ಕಾರವಾದ ಮೇಲೆ ಈ ಪೂಜ್ಯ ಕವಿಗಳು ವಾಸುಕಿಯ ಮರಣವನ್ನು ಕುರಿತು ದುಃಖದಿಂದ ಹೃದಯ ಕಲಕುವಂಥ ಗೀತೆಯೊಂದನ್ನು ಹಾಡಿದರು. ಆ ಗೀತೆಯನ್ನು ಹೀಗೆ ಅನುವಾದಿಸಬಹುದು :

ಉಣವಿನಲ್ಲಿ ಸವಿಯಾದವಳೆ, ನನ್ನಂತರಂಗದ ಸಖಿಯೆ
ಅಕ್ಕರೆಯ ಚನ್ನೆ ಮಾತು ತಪ್ಪದ ಮನದನ್ನೆ
ಅಡಿಮುಟ್ಟಿ ನಮಿಸಿ, ನಾ ಮಲಗಿದ ಮೇಲೊರಗಿ
ಮುಂಜಾನೆ ಮೊದಲೇಳುವ ಮುಗುದೆಯೇ
'ಹೋದೆಯಾ' ಎಂದೆನ್ನ ಕಣ್ಣಾಲಿ ಮರಗದೆ
ಇರುಳಲ್ಲಿ ಕಂಗೆಟ್ಟು ಬಳಲುತಿವೆ

ತಿರುವಳ್ಳುವರ ವೈಯಕ್ತಿಕ ಅಭಿರುಚಿ ಎಂಥದೆಂಬುದನ್ನು ನಾವು ಅಲ್ಪ ಸ್ವಲ್ಪ ಬಲ್ಲೆವು. ಆದರೆ ನಮ್ಮ ಊಹೆಯನ್ನೇ ನಾವು ಅವರ ಜೀವನ ಚರಿತ್ರೆಯೆಂದು ತಪ್ಪುಗ್ರಹಿಸಬಾರದು. ವಳ್ಳುವರು 1191 ನೆಯ ಕುರಳಿನಲ್ಲಿ ಹೀಗೆ ಹೇಳುತ್ತಾರೆ :

ತವೊಲ್ಮವಿತ್ತು ಇನಿಯನೊಲವನು ಗೆದ್ದ
ಕಾಮಿನಿಯರು
ಕಾಮವೇದನೆಯ ಬೀಜವಿಲ್ಲದ
ಹಣ್ಣನ್ನು ಸವಿದವರು

ಬೀಜಗಳಿಂದ ತುಂಬಿರುವ ದಾಳಿಂಬೆಯಂತಹ ಹಣ್ಣನ್ನು ಅಗಿದು ತಿನ್ನುವಾಗ ತಿರುಳಿನಿಂದ ನಾಲಗೆಗೆ ಆಗುವ ಸುಖಕ್ಕೆ ಅಸಂಬದ್ಧ ಬೀಜಗಳಿಂದ ಆಗಿಂದಾಗ್ಗೆ ಅಸಹನೀಯವಾದ ಅಡ್ಡಿಯಾಗುತ್ತದೆ. ಆದರೆ ಬಾಳೆಯ ಹಣ್ಣನ್ನಾಗಲಿ, ಬೀಜ ವಿಲ್ಲದ ದ್ರಾಕ್ಷಿಯನ್ನಾಗಲಿ ಬಾಯಿಗೆ ಹಾಕಿಕೊಂಡು ಜಗಿದಾಗ ಅದನ್ನು ತಿನ್ನುವ ಇಂದ್ರಿಯ ಸುಖಕ್ಕೆ ಯಾವ ಅಡ್ಡಿಯೂ ಬರುವುದಿಲ್ಲ. ತಿರುವಳ್ಳುವರು ಸಮರಸ ದಾಂಪತ್ಯಕ್ಕೂ ಬೀಜವಿಲ್ಲದ ಹಣ್ಣನ್ನು ತಿನ್ನುವುದಕ್ಕೂ ಇರುವ ಏಕಾಗ್ರತೆಯನ್ನು ಹೋಲಿಕೆಯಿತ್ತಿರುವುದನ್ನು ನೋಡಿದರೆ ಅವರಿಗೆ ಬೀಜವಿಲ್ಲದ ಹಣ್ಣಿನ ಬಗ್ಗೆ ಪಕ್ಷಪಾತವಿತ್ತೆಂದು ವ್ಯಕ್ತವಾಗುತ್ತದೆ.

ಅವರು ತುಂಬ ಪರೋಪಕಾರಿಗಳೂ, ಸಜ್ಜನರೂ ಆಗಿದ್ದರು. ಅವಾಚ್ಯ ವಾಡುವ ನಿಂದಕರನ್ನು ಕುರಿತು ಅನುಕಂಪೆಯ ನಗೆಯೊಂದಿಗೆ ಅವರು ಹೀಗೆ ಹೇಳುವರು:

ಸವಿಮಾತು ಇರುವಾಗ ಅಹಿತವನಾಡುವುದು
ತನಿವಣ್ಣುಗಳಿದ್ದೂ ಕಾಯ ಕಿತ್ತು ತಿಂದಂತೆ (100)

ಆತ್ಮೀಯವಾದ ಉಪಮೆಯ ಮೂಲಕ ನಿಂದಕನ ಗಮನವನ್ನು ಸೆಳೆದ ಬಳಿಕ ಅವನ ಸ್ವಾರ್ಥ ಆಸಕ್ತಿಯನ್ನು ಕುರಿತು ಹೀಗೆ ಮನವಿ ಮಾಡಿರುವರು:

ಸವಿಮಾತುಗಳಲಿ ಸುಖ ಕೊಡುವುದನು
ಕಾಣ್ಬವನು
ಕೆಡು ಮಾತುಗಳನು ಬಳಸುವುದು ಏಕೆ? (99)

ಹಾಸ್ಯಕೌಶಲವು ವಳ್ಳುವರಿಗೆ ಒಂದು ಉನ್ನತ ಸ್ಥಾನವನ್ನು ಗಳಿಸಿಕೊಟ್ಟಿರು ವಂತೆ ತೋರುತ್ತದೆ. ಆ ಎತ್ತರದಿಂದ ಅವರು ಮಾನವ ಜೀವನದ ದೌರ್ಬಲ್ಯಗಳು

ಮತ್ತು ಅಸಾಂಗತ್ಯಗಳನ್ನು ಸಾರ್ವತ್ರಿಕವಾದ ತಿಳುವಳಿಕೆಯಿಂದಲೂ ಷೇಕ್ಸ್‌ಪಿಯರ‌ನ ಕ್ಷಮಾಗುಣದಿಂದಲೂ ಕೂಡಿ ನೋಡಬಲ್ಲರು. ಈ ಹಾಸ್ಯಪ್ರಜ್ಞೆ ವಳ್ಳುವರನ್ನು ಹುಳಿಯಾದ ಹತಾಶಾವಾದಿಗಳಾಗದಂತೆ ಕಾಪಾಡಿದೆ. ವಾಸ್ತವಿಕವಾಗಿ ಅವರು ದೈವದತ್ತವಾದ ಹಾಸ್ಯಪ್ರಜ್ಞೆಯನ್ನು ಬೆಳಸಿಕೊಳ್ಳುವಂತೆ ಬೋಧಿಸಿರುವರು.

ನಗಬಲ್ಲಗುಣವಿಲ್ಲದವರಿಗೆ
ಅನಂತವೀಲೋಕದಲಿ
ಹಗಲು ಕತ್ತಲೆಯಿಂ
ಬೇರ್ಪಡಿಸಿ ಕಾಣಲರಿದು (999)

ತಮ್ಮ ಸಹಜೀವಿಗಳಲ್ಲಿ ಅವರಿಗಿದ್ದ ಗಾಢವಾದ ಅನುಕಂಪೆಯಿಂದ ಹಲವು ವೇಳೆ ಅವರ ಕಣ್ಣುಗಳಿಂದ ನೀರನ್ನು ಹರಿಸುತ್ತಿತ್ತು. ಕೆಡುಕನ್ನು ಕಂಡಾಗ ಅವರಿಗೆ ಆಗುತ್ತಿದ್ದ ಕೋಪವನ್ನು ನೋಡುವಂತಹುದಾಗಿತ್ತು. "ಬಡತನಕ್ಕಿಂತಲೂ ಹೆಚ್ಚು ಮಾರಕವಾದುದನ್ನು ನೀವು ಬಲ್ಲಿರಾ?" ಎಂದು ಅವರು ಕೇಳುತ್ತಾರೆ. ಅನಂತರ ಸ್ವಲ್ಪ ತಡೆದು ಮತ್ತೆ ಪ್ರಶ್ನೆಗೆ ಉತ್ತರಿಸುತ್ತಾ ಹೀಗೆ ಹೇಳುತ್ತಾರೆ: "ಬಡತನಕ್ಕಿಂತಲೂ ಹೆಚ್ಚು ಮಾರಕವಾದದ್ದು ಬಡತನವೊಂದೇ!" (ಎಂದರೆ ಬಡತನಕ್ಕಿಂತಲೂ ಮಾರಕವಾದದ್ದು ಬೇರೊಂದಿಲ್ಲ.)

ಬಹುಮಟ್ಟಿಗೆ ತೀರ ವಿರಳವಾಗಿ ಕಲಿಯುವ ಪಾಠವಾದ ಕೆಲವೇ ಕೆಲವು ಉಜ್ವಲವಾದ ಮಾತುಗಳಲ್ಲಿ ಮನಸ್ಸಿಗೆ ನಾಟುವಂತಹ ಸಂಕ್ಷಿಪ್ತತೆಯನ್ನು ಅವರು ಕಲಿತಿದ್ದರು. ತಮ್ಮ ಪ್ರಶ್ನೆಯನ್ನು ತಳಮುಟ್ಟಿ ನೋಡಿ ದೈತ್ಯ ಪ್ರತಿಭೆಯ ನ್ಯಾಯಾಧಿಪತಿಯಂತೆ ನಿರ್ಣಾಯಕ ಸ್ಥಾನದಲ್ಲಿ ಮಂಡಿಸುತ್ತಿದ್ದರು. ಸಾಮಾಜಿಕನು ಅನುಸರಿಸಬೇಕಾದ ಕಾನೂನುಗಳನ್ನು ಅವರು ಎಷ್ಟು ಚೆನ್ನಾಗಿ ಗ್ರಹಿಸಿದ್ದರೆಂದರೆ ಅವುಗಳನ್ನು ಅಮೃತಸಮಾನವೆನ್ನಿಸುವಂತೆ ನಮಗೆ ನೀಡಬಲ್ಲವರಾಗಿದ್ದರು.

ಪರಿಸರ ಮತ್ತು ಆನುವಂಶಿಕತೆಗಳ ನಡುವೆ ಪ್ರಾಚೀನ ಕಾಲದಿಂದಲೂ ಇರುವ ವಿವಾದದಲ್ಲಿ ಅವರು ಪರಿಸರದ ಬೆಂಬಲವಾಗಿ ಹೆಚ್ಚು ಒತ್ತುಕೊಟ್ಟರು. ಒಬ್ಬ ಮನುಷ್ಯನು ತನ್ನ ವ್ಯಕ್ತಿತ್ವದ ಬಳವಣಿಗೆಯಲ್ಲಿ ಆನುವಂಶಿಕವಾಗಿ ತಾನು ಪಡೆದ ಜೀವಾಣುಗಳಿಗಿಂತಲೂ ಪರಿಸರಕ್ಕೆ ಋಣಿಯಾಗಿರುವನೆಂದು ಅವರು ನಂಬಿದ್ದರು. "ನೀಚರ ಸಹವಾಸ ಸೇರದಿರುವುದು" (ಶಿಟ್ರಿನಂ ಶೇರಾಮೈ) ಎಂಬ ಅಧ್ಯಾಯದಲ್ಲಿ ಅವರು ಹೀಗೆ ಹೇಳುತ್ತಾರೆ:

ನೆಲದ ಗುಣದಿಂ ಹರಿವ ನೀರಿನ ಗುಣ ಮಾರ್ಪಡುವುದೆಂತೊ
ಅಂತೆ ಒಡನಾಟದಿಂ ಮನುಜನರಿವು ತೋರ್ಪಡುವುದು (452)

ಮತ್ತೊಂದು ಕುರಳಿನಲ್ಲಿ ಅವರು ಹೇಳುವುದೇನೆಂದರೆ :

ಮನುಜನರಿವು ತನ್ನ ಮನದೊಳಿರುವಂತೆ ತೋರಿ
ಅವನ ಒಡನಾಟದಲಿ ಅದು ನೆಲಸಿಹುದು (454)

ವಳ್ಳುವರು ಉದಾರಿಯೂ ದಾಕ್ಷಿಣ್ಯಪರರೂ ಸಾಮಾನ್ಯವಾಗಿ ಪ್ರಸನ್ನಚಿತ್ತರೂ ಹಾಸ್ಯಪ್ರವೃತ್ತರೂ ಆಗಿದ್ದರು. ಆತ್ಮೀಯವೂ ದೃಢವೂ ಆದ ಸ್ನೇಹವನ್ನು ಸಂಪಾದಿಸಬಲ್ಲವರಾಗಿದ್ದರು; ಕ್ಷಿಪ್ರವಾಗಿ ಕ್ಷಮಿಸಿ ತಪ್ಪನ್ನು ಮರೆತುಬಿಡುತ್ತಿದ್ದರು. ನಾಟುನುಡಿಯಲ್ಲಿ ಸಮರ್ಥರು; ಪುಟಗಟ್ಟಲೆಯ ಜ್ಞಾನವನ್ನು ಒಂದೇ ಪಂಕ್ತಿಯಲ್ಲಿ ಹುದುಗಿಡುತ್ತಿದ್ದರು. ತಿರುವಳ್ಳುವರು ತುಂಬ ಸೂಕ್ಷ್ಮಸ್ವಭಾವದರಾಗಿದ್ದರೂ ಅವರು ಹೀಗೆ ಹೇಳಿರುವರು :

ಪರನಿಂದೆ ಸ್ವನಿಂದೆಯೆಂಬಂತೆ
ನಾಚಿಕೊಳುವವರನು
ವಿನಯವಂತಿಕೆಯ ದೇಗುಲವೆಂದು
ಲೋಕಪೂಜಿಸುವುದು (1015)

ಸೂಕ್ಷ್ಮಾಭಿರುಚಿಯುಳ್ಳ ನಯಗಾರಿಕೆ ಅವರ ವಿಶಿಷ್ಟಗುಣ.

ಅಶನ ವಸನ ಮಿಕ್ಕೆಲ್ಲ ಜೀವಿಗಳಿಗು ಸಾಮಾನ್ಯವೆನಿಪುದು
ವಿನಯವಂತಿಕೆಯೊಂದೆ ವಿಶಿಷ್ಟರನು ಬೇರ್ಪಡಿಸುವುದು (1012)

ಜ್ಞಾನದ ಎಲ್ಲ ಶಾಖೆಗಳನ್ನೂ ವಳ್ಳುವರು ಪ್ರೀತಿಸುತ್ತಿದ್ದರು. ಚಿಂತನೆಗಳೇ ಅವರ ಆಹಾರ ಪಾನೀಯಗಳಾಗಿದ್ದವು. ಅವರು ಅವುಗಳನ್ನು ಸಂಗ್ರಹಿಸಿದರು, ಸವಿ ನೋಡಿದರು, ವಿಂಗಡಿಸಿದರು ಮತ್ತು ತಮ್ಮ ದಿನಚರಿಯಲ್ಲಿ ಅವುಗಳನ್ನು ಬರೆದಿಟ್ಟರು. ವರ್ಷಗಟ್ಟಲೆ ಅವುಗಳನ್ನು ಕುರಿತು ಮನನ ಮಾಡಿದ ಮೇಲೆ ಅವುಗಳನ್ನು ಪರಸ್ಪರವಾಗಿ ಹೊಂದಿಸಿ ನೋಡಿ, ಕ್ರಮಗೊಳಿಸಿ, ಅನಂತರ ತಮ್ಮ ಕಾವ್ಯದಲ್ಲಿ ಸೋಸಿಟ್ಟರೂ ಚಿಂತನೆಗಳನ್ನಾಗಲೀ ಅಭಿಪ್ರಾಯಗಳನ್ನಾಗಲೀ ಹೀಗೆ ಕ್ರಮಪೂರ್ವಕವಾದ ಕೌಶಲದಿಂದ ಮಾನ್ಯ ಮಾಡಿರುವುದು ವಿರಳ.

ವಳ್ಳುವರು ತಮ್ಮ ಕುರಳೊಂದರಲ್ಲಿ "ವಾಳುವಮ್ ಎನ್ನುಮ್ ಶೆರುಕ್ಕು" ಅಥವಾ "ಬಾಳುವುದರಲ್ಲಿರುವ ಹೆಮ್ಮೆ" ಎಂಬುದನ್ನು ಕುರಿತು ಪ್ರಸ್ತಾವಿಸಿದ್ದಾರೆ. ಇದು ಫ್ರೆಂಚ್ ಮನ್ನನ 'Jou de vivre' (ಬಾಳುವೆಯ ಆನಂದ) ಎಂಬ ಮಾತನ್ನು ನೆನಪಿಗೆ ತರುತ್ತದೆ.

ವಳ್ಳುವರು ಯೌವನದ ಪಕ್ವಾವಸ್ಥೆಯಲ್ಲಿ ತಮ್ಮ ತಿರುಕ್ಕುರಳಿಗೆ ತಮಿಳು ಸಂಗದಲ್ಲಿ (ತಮಿಳು ವಿದ್ವತ್ ಸದಸ್ಸು) ಮಾನ್ಯತೆಯನ್ನು ದೊರಕಿಸಿಕೊಳ್ಳಲು ಮಧುರೆಗೆ ಬಂದರೆಂದು ಐತಿಹ್ಯವು ಒತ್ತಿ ಹೇಳುತ್ತದೆ. ಸಂಗದ ತಮಿಳು ಪಂಡಿತ ಕವಿ ಸದಸ್ಯರು ಎಷ್ಟು ಕಠಿಣರೂ ಅಸೂಯಾಪರರೂ ಆಗಿದ್ದರೆಂದರೆ ಅವರು ವಳ್ಳುವರಿಗೆ ಸುಲಭವಾಗಿ ಮನ್ನಣೆ ನೀಡಲಿಲ್ಲ; ಅವರನ್ನು ಪ್ರಶ್ನೆಗಳಿಂದ ನಗೆಗೀಡು ಮಾಡಿದರು. ಆದರೆ ವಳ್ಳುವರು ಅವರ ಪ್ರಶ್ನೆಗಳನ್ನೆಲ್ಲ ಅನಾಯಾಸವಾಗಿ ಉತ್ತರಿಸಿ ಅವರನ್ನು ಕಂಗೆಡಿಸಿದರು. ಕಟ್ಟಕಡೆಯದಾಗಿ ಅವರು ಹೇಳಿದ್ದೇನೆಂದರೆ "ಓ ತಿರುವಳ್ಳುವರೇ, ಇಗೋ ಕೇಳಿ; ನಾವು ನಿಮ್ಮನ್ನು ಅಂತಿಮವಾಗಿ ಪರೀಕ್ಷಿಸುತ್ತೇವೆ. ಮೀನಾಕ್ಷಿ ದೇವಾಲಯದ ಪುಷ್ಕರಣಿಯಲ್ಲಿ ತೇಲುತ್ತಿರುವ ಸುವರ್ಣ ಸಂಗಪೀಠವು (ಸಂಗಪ್ಪಲಗೈ) ನಿಮ್ಮ ಕೃತಿಯನ್ನು ಸ್ವೀಕರಿಸಿದರೆ ನಾವು ಮನ್ನಣೆ ನೀಡುತ್ತೇವೆ, ಇಲ್ಲವಾದರೆ ತಿರಸ್ಕರಿಸುತ್ತೇವೆ." ಅವರೆಲ್ಲರೂ ತೇಲುತ್ತಿರುವ ಸಂಗಪೀಠದಲ್ಲಿ ತಿರುಕ್ಕುರಳಿಗೆ ಸ್ವಲ್ಪವೂ ಎಡೆಯಿಲ್ಲದಂತೆ ಒಬ್ಬರನ್ನೊಬ್ಬರು ಒತ್ತಿಕೊಂಡು ಕುಳಿತರು. ವಳ್ಳುವರು ವಿಚಲಿತರಾಗದೆ ಕೈಯಲ್ಲಿ ತಿರುಕ್ಕುರಳನ್ನು ಹಿಡಿದು ತೇಲುತ್ತಿದ್ದ ಸಂಗ ಪೀಠದ ಬಳಿ ಸಾರಿದರು. ಅವರು ಸನಿಹಕ್ಕೆ ಬರುತ್ತಿದ್ದಂತೆಯೇ ಸುವರ್ಣದ ಸಂಗ ಪೀಠವು ತಾನಾಗಿಯೇ ಮುಂದೆ ಚಾಚಲು, ತಿರುವಳ್ಳುವರು ತಮ್ಮ ಕೃತಿಯೊಡನೆ ಅದರಲ್ಲಿ ಸುಖವಾಗಿ ಕುಳಿತುಕೊಳ್ಳಲು, ಎಡೆಮಾಡಿಕೊಟ್ಟಿತು. ಅನಂತರ ಗ್ರಂಥವು ಎಷ್ಟು ಬೃಹದಾಕಾರವಾಗಿ ಬೆಳೆಯುತ್ತ ಹೋಯಿತೆಂದರೆ ಪೀಠದ ಮೇಲೆ ಕುಳಿತಿದ್ದ ಸದಸ್ಯರನ್ನೆಲ್ಲ ಒಬ್ಬೊಬ್ಬರನ್ನಾಗಿ ತಳ್ಳಲು ಕಡೆಗೆ ಸಮಸ್ತ ಸಂಗವೂ ಪುಷ್ಕರಣಿಯಲ್ಲಿ ಮುಳುಗಿತು. ಈ ರೀತಿ ಸಂಗದ ಒಟ್ಟು ಸದಸ್ಯರೆಲ್ಲರಿಗಿಂತಲೂ ವಳ್ಳುವರು ಶ್ರೇಷ್ಠರೆಂದು ಸಂಗಪೀಠವು ತೀರ್ಮಾನಿಸಿತು. ಅಂದಿನಿಂದ ವಳ್ಳುವರು 'ದೈವಿಕ ಕವಿ' ಯೆಂಗು ಸುಪ್ರಸಿದ್ಧರಾಗಿರುತ್ತಾರೆ. ಕಲ್ಪಿಸಲೂ ಕಲ್ಪನೆಯೊಂದಿಗೆ ರಮಿಸಲೂ ಎಂತಹ ದೃಷ್ಟಾಂತ ಕಥೆಯಿದು !

ವರಕವಿಯ ಕುರಳನ್ನು ಹೇಗೆ ಓದಬೇಕೋ ಹಾಗೆ ಓದಲು, ಅದರ ಕರ್ತೃವಿನ ಬಹುಮುಖ ಪ್ರತಿಭೆಯನ್ನೂ ಚಿಂತನಪರರಾದ ಉದ್ದಾಮ ಪುರೋಹಿತರ ಪ್ರಬೋಧನ ಪರಂಪರೆಯಲ್ಲಿ ಅವರ ಸ್ಥಾನವೇನೆನ್ನುವುದನ್ನೂ ಮೆಚ್ಚಿಕೊಳ್ಳ ಬೇಕಾದುದು ಅಗತ್ಯ. ಆದ್ದರಿಂದ, ಯಾರೇ ಆಗಲಿ, ಪರಿಪೂರ್ಣವಾದ ಜ್ಞಾನ ವನ್ನು ಗಳಿಸಿ ಪರಿಪಕ್ವವಾದ ವಯಸ್ಸಿನಲ್ಲಿ ಕುರಳನ್ನು ಕೈಗೆತ್ತಿಕೊಳ್ಳಬೇಕಾಗುತ್ತದೆ. ತಿರುಕ್ಕುರಳನ್ನು ದೈತ್ಯಪ್ರಮಾಣದ ಒಂದೇ ಒಂದು ತುತ್ತಿನಲ್ಲಿ ನುಂಗತೊಡಗದೆ ಹೋಮಿಯೋಪತಿ ಔಷಧಿಯನ್ನು ಸ್ವಲ್ಪ ಸ್ವಲ್ಪವಾಗಿ ಸೇವಿಸುವಂತೆಯೂ ಅಮೂಲ್ಯವಾದ ಸುಧೆಯನ್ನು ರುಚಿನೋಡುವಂತೆಯೂ ಓದಬೇಕು. ಹಾಗೆ

ಓದಿದ್ದೇ ಆದರೆ, ವಳ್ಳುವರ ರಚನೆಗಳು ಮಾನವನ ಸಾಹಸೋದ್ಯಮದಲ್ಲಿ ಹೆಚ್ಚು ಹೆಚ್ಚಾಗಿ ಪಾಲ್ಗೊಳ್ಳಲು ಕರೆಯೀಯುವುದೆಂದೂ ಅವು ತಮ್ಮ ಮಟ್ಟಿಗೆ ಜೀವನಾನಂದದ ಪವಿತ್ರೋತ್ಸವವೆಂದೂ ವಾಚಕರು ತಿಳಿಯುವರು.



# 5. ತಿರುಕ್ಕುರಳಿನ ವ್ಯಾಖ್ಯಾನ

ತಿರುಕ್ಕುರಳು, ಎಷ್ಟೊಂದು ಜಟಿಲವೂ, ಪ್ರೌಢವೂ ಆಗಿದೆಯೆಂದರೆ ಯಾರು ಅದನ್ನು ಗೌರವದಿಂದ ಮನಸ್ಸಿನಲ್ಲಿ ಮನನ ಮಾಡುವರೋ ಅವರಿಗೆ ಮಾತ್ರ ಅದು ತನ್ನ ರಹಸ್ಯವನ್ನು ಬಿಟ್ಟುಕೊಡುವುದು. ಪ್ರಾಚೀನ ಪರಂಪರೆಯಲ್ಲಿ ಬಂದ ತಿರುಕ್ಕುರಳಿನ ವ್ಯಾಖ್ಯಾನಕಾರರ ಸಂಖ್ಯೆ ಹತ್ತು. ಅದರಲ್ಲಿ ಹೆಚ್ಚು ಪ್ರಸಿದ್ಧರಾದವರು ಪರಿಮೇಲ ಉಗರು. ಕೆಲವು ವ್ಯಾಖ್ಯಾನಕಾರರು ತಾವು ಅಪೇಕ್ಷಿಸಿದ್ದನ್ನು ಮನಗಾಣಲು ಕುರಳ್‌ನಲ್ಲಿ ಓದಲೆಳಸಿದ್ದಾರೆ. ಕೆಲವು ಕುರಳುಗಳು ಪ್ರಾಚೀನ ವ್ಯಾಖ್ಯಾನಕಾರರು ಜ್ಞಾನವನ್ನೆಲ್ಲ ಒಟ್ಟು ಗೂಡಿಸಿದರೂ ಬೇಧಿಸಲಾಗದಂತಿವೆ. ಇಪ್ಪತ್ತನೆಯ ಶತಮಾನದಲ್ಲಿ ತಮಿಳುನಾಡು ಪಡೆದ ಬಹುದೊಡ್ಡ ರಸಾಭಿಜ್ಞರೆಂದರೆ ರಸಿಕಮಣಿ ದಿವಂಗತ ಟಿ. ಕೆ. ಚಿದಂಬರ ನಾಥ ಮುದಲಿಯಾರರು. ಇವರನ್ನು ಫ್ರಾನ್ಸಿನ ಸೈಂಟ್‌ಬೂವೆಗೆ ಹೋಲಿಸಬಹುದು. ಈ ಮಹಾಶಯರು ಅನೇಕ ಕುರಳುಗಳ ಮೇಲೆ ಹೊಸ ಬೆಳಕನ್ನು ಚೆಲ್ಲುವುದರಲ್ಲಿ ಯಶಸ್ವಿಯಾಗಿದ್ದಾರೆ. ಉದಾಹರಣೆಗೆ ಈ ಕುರಳನ್ನು ನೋಡಿ:

ಉದವಿ ವರೈತ್ತನ್ನು ಉದವಿ, ಉದವಿ
ಶೆಯಪಟ್ಟಾರ್ ಶಾಲ್‌ಬಿನ್ ವರೈತ್ತು (105)

ಅದನ್ನು ಹೀಗೆ ಅನುವಾದಿಸಬಹುದು:

ಉಪಕಾರವನ್ನಳೆದು ಸೀಮೆಯನು
ಕಲ್ಪಿಸುವುದು ಕಷ್ಟತಮ
ಉಪಕೃತಿಯ ಪಡೆದವರ ಸಂಪನ್ನತೆಯೆ
ಉಪಕಾರವನಳೆವ ಮಾನದಂಡ

ಪ್ರಾಯಶಃ ಈ ಅನುವಾದವು ಮೂಲಕುರಳಿನ ಜಟಿಲ ಹಾಗೂ ಸೂಚ್ಯಾಂಶಗಳನ್ನು ತಿಳಿಸದೆ ಹೋಗಬಹುದು. ಅದರಲ್ಲಿರುವ ಸೂಕ್ತವ್ಯಂಜಕಾರ್ಥವನ್ನು ಅದರ ಆಳಕ್ಕೆ ಇಳಿದು ಅದನ್ನು ಹೊರತೆಗೆಯಲು ದಿ. ರಸಿಕಮಣಿಯವರಿಗೆ ಒಪ್ಪಿಸಲಾಯಿತು. ಅವರು ಈ ಕುರಳಿನಲ್ಲಿ ಹುದುಗಿರುವ ಸತ್ಯವನ್ನು ಕಾಲ್ಪನಿಕವಾದ ಒಂದು ದೃಷ್ಟಾಂತವನ್ನಿತ್ತು ನಿರ್ದೇಶಿಸುತ್ತಿದ್ದರು. ತಿರುವಳ್ಳುವರ ಸಮಕಾಲೀನ

ನಾಗಿದ್ದ ಶ್ರೀಮಂತನೊಬ್ಬನು ಸತ್ತನು. ಅವನ ಮಗನು ತನ್ನ ತಂದೆಯ ವರ್ಷಾಬ್ಧಿಕವನ್ನು ನಿರ್ಗತಿಕರೂ, ಬಡವರೂ ಆದ ಅನೇಕ ಬ್ರಾಹ್ಮಣರಿಗೆ ಸಂತರ್ಪಣೆಯನ್ನು ಏರ್ಪಡಿಸುವ ಮೂಲಕ ಮಾಡಿದನು. ಸಂತರ್ಪಣೆಯೆಲ್ಲ ಮುಗಿದ ಮೇಲೆ ಬ್ರಾಹ್ಮಣರು ಒಬ್ಬೊಬ್ಬರಾಗಿ ಶ್ರೀಮಂತನ ಸೌಧದಿಂದ ಹೊರಗೆ ಬಂದರು. ವಳ್ಳುವರು ಆ ರಸ್ತೆಯ ಮೂಲೆಯೊಂದರಲ್ಲಿ ನಿಂತುಕೊಂಡು ಸಂತರ್ಪಣೆ ಮುಗಿಸಿಕೊಂಡು ಹಿಂದಿರುಗುತ್ತಿದ್ದ ಅತಿಥಿಗಳಲ್ಲಿ ಒಬ್ಬೊಬ್ಬರನ್ನಾಗಿ ಕರೆದು ಈ ಪ್ರಶ್ನೆ ಕೇಳಿದರು: "ನಿಮ್ಮ ಯಜಮಾನನು ಊಟದೊಂದಿಗೆ ನಿಮಗೆ ದಕ್ಷಿಣೆಯನ್ನು ಕೊಟ್ಟನೆ?" ಮೊದಲನೆಯ ಬ್ರಾಹ್ಮಣನು "ಹುಂ. ಭಿಕ್ಷೆ ಕೊಡುವ ಹಾಗೆ ಐದು ನಾಣ್ಯಗಳನ್ನು ಕೊಟ್ಟ" ಎಂದ ತಿರಸ್ಕಾರದಿಂದ. ತಿರುವಳ್ಳುವರು ಚಿನ್ನದ ನಾಣ್ಯವನ್ನು ಭಿಕ್ಷವೆಂದು ವಿವರಿಸಿದುದನ್ನು ತಮ್ಮ ದಿನಚರಿಯಲ್ಲಿ ಹೀಗೆ ಬರೆದುಕೊಂಡರು: "ಐದು ಚಿನ್ನದ ನಾಣ್ಯಗಳು ಐದು ಭಿಕ್ಷೆಯ ನಾಣ್ಯಗಳಿಗೆ ಸಮ." ವಳ್ಳುವರು ಮತ್ತೊಬ್ಬ ಬ್ರಾಹ್ಮಣನಿಗೂ ಅದೇ ಪ್ರಶ್ನೆ ಹಾಕಿದರು. "ಹೌದು ಮಹನೀಯರೆ, ಐದು ಚಿನ್ನದ ನಾಣ್ಯಗಳನ್ನು ಕೊಟ್ಟರು" ಎಂದನು. ವಳ್ಳುವರು ಹೀಗೆ ಬರೆದುಕೊಂಡರು: "ಈ ಮನುಷ್ಯನ ಎಣಿಕೆಯಲ್ಲಿ 5 ಚಿನ್ನದ ನಾಣ್ಯಗಳು ಸರಿಯಾಗಿ 5 ಚಿನ್ನದ ನಾಣ್ಯಗಳಿಗೆ ಸಮವಾಗಿವೆ." ಮೂರನೆಯ ಬ್ರಾಹ್ಮಣನು ನಾನೊಬ್ಬ ದರಿದ್ರ. ಆ ಮಹಾನುಭಾವನು ಕೊಟ್ಟ ಐದು ನಾಣ್ಯಗಳು ನನಗೆ 500 ಚಿನ್ನದ ನಾಣ್ಯಗಳಷ್ಟು ಬೆಲೆಬಾಳುವವು." ಇದೇ ಪ್ರಶ್ನೆಯನ್ನು ವಳ್ಳುವರು ನಾಲ್ಕನೆಯ ಬ್ರಾಹ್ಮಣನಿಗೆ ಹಾಕಿದಾಗ ಆ ಬ್ರಾಹ್ಮಣನ ಕಣ್ಣುಗಳು ಕೃತಜ್ಞತೆಯಿಂದ ಹೊಳೆಯಲಾರಂಭಿಸಿದುವು. ಅವನು ಸಂತೋಷದಿಂದ ಕುಣಿಕುಣಿಯುತ್ತ ಹೇಳಿದ: "ಆ ಮಹಾಶಯ, ಈ ನಾಣ್ಯಗಳನ್ನು ತನ್ನ ತಿಜೋರಿಯಲ್ಲಿ ಭದ್ರವಾಗಿಟ್ಟುಕೊಂಡಿದ್ದರೆ ಅವೇನು ಹೊರಬರಬೇಕೆಂದು ಚಡಪಡಿಸುತ್ತಿರಲಿಲ್ಲ. ಎಂಥ ಉದಾರಿ ಆತ! ನನ್ನ ಹೆಂಡತಿ ನಾನು ಮತ್ತು ನಮ್ಮ ಹನ್ನೆರಡು ಮಕ್ಕಳು ಒಂದು ವಾರದಿಂದ ಉಪವಾಸವಿದ್ದೇವೆ. ಈ ಐದು ನಾಣ್ಯಗಳು ನಮ್ಮನ್ನು ಒಂದು ತಿಂಗಳವರೆಗೆ ಜೀವಂತವಾಗಿಡಬಲ್ಲವು. ನಾನು ಈ ಐದು ನಾಣ್ಯಗಳನ್ನು 50 ಲಕ್ಷ ನಾಣ್ಯಗಳಿಗೆ ಸಮವೆಂದು ಭಾವಿಸುತ್ತೇನೆ." ವಳ್ಳುವರು ಇವೆಲ್ಲವನ್ನು ದಿನಚರಿಯಲ್ಲಿ ಬರೆದು ಕೊಂಡರು. ಒಂದೇ ಬೆಲೆಯ (ಐದು) ನಾಣ್ಯಗಳು ಅವುಗಳನ್ನು ಪಡೆದವರ ದೃಷ್ಟಿಗನುಗುಣವಾಗಿ ಬೇರೆ ಬೇರೆ ಮೌಲ್ಯಗಳನ್ನು ತಾಳಿದ ಅಂಶವನ್ನು ಕುರಿತು ಬಹು ದೀರ್ಘಕಾಲ ಚಿಂತಿಸಿದರು. ಒಡನೆಯೇ ಅವರಿಗೆ ಹೊಳೆಯಿತು: ಉಪಕೃತಿಯೆನ್ನುವುದು ತನ್ನದೇ ಆದ ವಾಸ್ತವಿಕ ಮೌಲ್ಯವನ್ನು ಪಡೆದಿಲ್ಲ. ಅದರ ಮೌಲ್ಯವು ಬಾಹ್ಯವಾದ ಇತರ ಸಂಗತಿಗಳಿಂದ ನಿರ್ಧರಿತವಾಗುತ್ತದೆ. ಅಂದರೆ ಪಡೆದವರ ಮನಸ್ಸಿನ ಸಂಪನ್ನತೆಯನ್ನು ಅದು ಅವಲಂಬಿಸಿದೆ. ಪಡೆದವನ ಸಂಸ್ಕೃತಿಯು

ಉನ್ನತವಾಗಿದ್ದರೆ ದಾನಿಯ ಉಪಕೃತಿಯ ಬೆಲೆಯೂ ಹೆಚ್ಚಾಗಿ ಕಾಣುತ್ತದೆ. ಇದು ಮನಶ್ಶಾಸ್ತ್ರೀಯವಾದ ಒಂದು ಸತ್ಯವೇ ಸರಿ. ತಿರುವಳ್ಳುವರ ದೊಡ್ಡ ಶೋಧನೆಗಳಲ್ಲಿ ಮತ್ತು ಅಂತರ್ದೃಷ್ಟಿಗಳಲ್ಲಿ ಇದೂ ಒಂದೆನ್ನಿಸಿದೆ. ಟಿ. ಕೆ. ಚಿದಂಬರನಾಥ ಮುದಲಿಯಾರರ ವಿವರಣೆಯನ್ನು ಕೇಳಿದ ಬಳಿಕ ನಾವು ಈ ಕುರಳನ್ನು ಪುನಃ ವಾಚಿಸಿದರೆ ಅದರ ಅಂತರಾರ್ಥವನ್ನು ಒಡನೆಯೇ ನಮಗೆ ಗ್ರಹಿಸಲು ಸಾಧ್ಯವಾಗುತ್ತದೆ:

ಉಪಕಾರವನಳೆದು ಸೀಮೆಯನು
ಕಲ್ಪಿಸುವುದು ಕಷ್ಟತಮ
ಉಪಕೃತಿಯ ಪಡೆದವರ ಸಂಪನ್ನತೆಯೆ
ಉಪಕಾರವನಳೆವ ಮಾನದಂಡ

ತಮಿಳುನಾಡಿನಲ್ಲಿ ತಿರುಕ್ಕುರಳ್ ರಚಿತವಾದ ಸಾವಿರ ವರ್ಷಗಳ ವರೆಗೆ, ಅಂದರೆ ಕವಿಚಕ್ರವರ್ತಿ ಕಂಬರ್ ಒಂಬತ್ತನೆಯ ಶತಮಾನದಲ್ಲಿ ಕಾಣಿಸಿಕೊಳ್ಳುವ ವರೆಗೆ, ಈ ಕುರಳಿನ ಅರ್ಥವನ್ನು ಗ್ರಹಿಸುವವರು ಯಾರೂ ಇರಲಿಲ್ಲ ಎಂದು ರಸಿಕ ಮಣಿಯವರು ಹೇಳುತ್ತಿದ್ದುದುಂಟು. ಕಂಬರ್ ತನ್ನ ರಾಮಾಯಣದಲ್ಲಿ ಈ ಕುರಳನ್ನು ತನ್ನ ಪ್ರತಿಭೆಗೆ ವಿಶಿಷ್ಟವಾದ ರೀತಿಯಲ್ಲಿ ಸ್ವಲ್ಪ ಬದಲಾವಣೆಯೊಂದಿಗೆ ದೃಷ್ಟಾಂತವಾಗಿ ತೆಗೆದುಕೊಂಡಿರುವುದನ್ನು ಅವರು ಉದಾಹರಿಸುತ್ತಿದ್ದರು.

ಕಂಬರ್ ವಿಶ್ವಾಮಿತ್ರರು ರಾಮಲಕ್ಷ್ಮಣರಿಗೆ ಮಹಾಬಲಿಯ ನಾಟಕೀಯ ಕಥೆಯನ್ನು ಹೇಳುವಂತೆ ನಿರೂಪಿಸಿದ್ದಾರೆ. ಮಹಾವಿಷ್ಣು, ವಾಮನರೂಪದಲ್ಲಿ ಮಹಾಬಲಿಯ ಆಸ್ಥಾನಕ್ಕೆ ಬಂದು "ನೀನು ಕೊಡಬಲ್ಲವನಾದರೆ, ನನಗೆ ಮೂರು ಅಡಿ ಅಳತೆಯ ಜಾಗವನ್ನು ದಾನವಾಗಿ ಕೊಡು" ಎಂದು ಕೇಳುತ್ತಾನೆ. ಉದಾರಿಯಾದ ಅರಸನು 'ತಥಾಸ್ತು' ಎಂದು ಒಪ್ಪಿಕೊಂಡು ವಾಮನನು ಚಾಚಿದ ಹಸ್ತಕ್ಕೆ ನೀರೆರೆದು ದಾನವನ್ನು ದೃಢಪಡಿಸಿದನು. ನೀರು ಹಸ್ತಕ್ಕೆ ಸೋಕಿದೊಡನೆಯೇ ವಾಮನನು ಬೃಹದಾಕಾರದಲ್ಲಿ ಬೆಳೆದು ತನ್ನ ಎತ್ತಿದ ಒಂದು ಪಾದದಿಂದ ಮೂರು ಲೋಕಗಳನ್ನೂ ವ್ಯಾಪಿಸಿ ಅಳೆದು ಭೂಮ್ಯಾಕಾಶಗಳನ್ನು ಮೀರಿ ಬೆಳೆದು ಮತ್ತೊಂದು ಪಾದವನ್ನು ಬೇರೆಲ್ಲೂ ಎಡೆಯಿಲ್ಲದೆ ಬಲಿಯ ತಲೆಯ ಮೇಲೆಯೇ ಇಡುತ್ತಾನೆ. ಆದರಿಂದ ಅವನ ಅಹಂಕಾರವನ್ನು ಅಳಿಸಿ ಆತ್ಯಂತಿಕ ಪರವಸ್ತುವಿನಲ್ಲಿ ಅವನನ್ನು ವಿಲೀನಗೊಳಿಸಿದನು. ಈ ಸಂದರ್ಭದಲ್ಲಿ ಕಂಬರ್ ವಳ್ಳುವರನ್ನು ಉದಾಹರಿಸುತ್ತಾ "ಅತಿಸಣ್ಣ ಉಪಕೃತಿಯನ್ನು ಪಡೆದ ಮಹಾ ಪುರುಷನಂತೆ ವಾಮನರೂಪವು ಎತ್ತರವಾಗಿ ಬೆಳೆದು ಸ್ವರ್ಗಗಳ ಮಿತಿಯನ್ನೂ ಮೀರಿ ವ್ಯಾಪಿಸಿಕೊಂಡಿತು"—

ಎಂದು ವಿವರಿಸುತ್ತಾರೆ. ಮಹಾಬಲಿಯು ದಾನವಾಗಿ ಕೊಟ್ಟ ಮೂರು ಅಡಿ ಸ್ಥಳ ವೇನೋ ಅತ್ಯಂತ ಅಲ್ಪವಾದುದು. ಆದರೆ ಅದನ್ನು ಸ್ವೀಕರಿಸಿದ ತ್ರಿವಿಕ್ರಮ ರೂಪಿಯಾದ, ದಾನ ಪಡೆದವನ ಬಲದಿಂದ ಆ ಅಡಿಗಳು ವಿಶ್ವವ್ಯಾಪಿಯಾಗಿ ಬೃಹದಾಕಾರವನ್ನು ತಾಳಿ, ಅಂತಿಮವಾಗಿ ದಾನಿಯನ್ನೇ ಬಲಿ ತೆಗೆದುಕೊಂಡಿತು." ಕಂಬರ್ ಈ ರೀತಿ ಮೇಲೆ ತಿಳಿಸಿದ ವಳ್ಳುವರ ಕುರಳಿಗೆ ಅತ್ಯಂತ ಮಾರ್ಮಿಕವಾದ ವ್ಯಂಗದ ತಿರುವನ್ನು ಕೊಟ್ಟಿದ್ದಾರೆ. ಹಾಗೆ ವ್ಯಂಗದ ತಿರುವನ್ನು ನೀಡುವಾಗ ಸೂತ್ರರೂಪದ ಕುರಳಿನ ಅಂತರಂಗವನ್ನು ಚೆನ್ನಾಗಿ ಗ್ರಹಿಸಿ ಅದನ್ನು ಅರ್ಥವತ್ತಾಗಿ ಪ್ರದರ್ಶಿಸಿದ್ದಾರೆ. ಈ ಕುರಳಿನ ಅರ್ಥವನ್ನು ಕಂಬರ್ ಅದರ ನಿಜರೂಪದಲ್ಲಿ ಗ್ರಹಿಸುವ ವರೆಗೆ ಸಾವಿರ ವರ್ಷಗಳು ಸಂದಿದ್ದರೆ ಕಂಬರ್ ಹೇಳಿದ ಅರ್ಥವನ್ನು ಮರು ವ್ಯಾಖ್ಯಾನವು ರಸಿಕಮಣಿಯವರಿಂದ ಅರ್ಥಮಾಡಿಕೊಳ್ಳಲ್ಪಟ್ಟು ಮೆಚ್ಚುವ ವರೆಗೆ ಮತ್ತೆ ಸಾವಿರ ವರ್ಷಗಳ ಕಾಲ ಕಾಯಬೇಕಾಯಿತು.

ಟಿ. ಕೆ. ಸಿ. ಯವರ ಮನೋಜ್ಞವ್ಯಾಖ್ಯಾನವಿಲ್ಲದೆ, ಅರ್ಥೈಸಲು ಕಷ್ಟವಾದ ಮತ್ತೊಂದು ಕುರಳನ್ನು ಇಲ್ಲಿ ಉದಾಹರಿಸಬಹುದು :

ಪ್ರೀತಿ ಧರ್ಮಕ್ಕೆ ಬಲವೆಂದು ಹೇಳುವರು
ಅಧರ್ಮಕ್ಕೆ ಅದೆ ಬಲವಾಗುವುದೆಂದು ತಿಳಿಯದವರು (76)

ವ್ಯಾಖ್ಯಾನಕಾರರು "ಪ್ರೀತಿ ನಮ್ಮನ್ನು ಅಧರ್ಮ ದೂರ ಮಾಡಲೂ ನೆರ ವಾಗುವುದು" ಎಂದು ವಿವರಿಸುತ್ತ ಬಂದಿದ್ದರು. ಆದರೆ ಟಿ. ಕೆ. ಸಿ. ಯವರು ಬೇರೊಂದು ಬಗೆಯಾಗಿ ವ್ಯಾಖ್ಯಾನಿಸಿದರು. ತೀರ ಸಾಮಾನ್ಯವಾಗಿ ನಡೆಯುವ ಸಂದರ್ಭವೊಂದರ ಮೂಲಕ ಅದನ್ನು ನಿರ್ದೇಶಿಸಿದರು. ಒಬ್ಬ ಕಸಬುದಾರ ಕಳ್ಳ ಪ್ರತಿದಿನ ಬೆಳಗ್ಗೆ 6 ಗಂಟೆಗೆ ಪೋಲೀಸ್ ಠಾಣೆಯಲ್ಲಿ ಹಾಜರಾಗಬೇಕಾಗಿತ್ತು. ಅವನಿಗೆ ಮನೆಯಲ್ಲಿ ಹಸಿವಿನಿಂದ ತೊಳಲುತ್ತಿದ್ದ ಒಬ್ಬ ಹೆಂಡತಿ ಮತ್ತು ಆರು ಮಕ್ಕಳು ಇದ್ದರು. ಅವನು ರಾತ್ರಿಯಲ್ಲಿ ಮೂವತ್ತು ಮೈಲಿಗಳಷ್ಟು ಓಡೋಡಿ ಬಯಲಿನಲ್ಲಿ ಮಲಗಿದ್ದ ಜಾತ್ರೆಯ ಜನರನ್ನು ಕಂಡು, ಜೀವದಾಸೆಯನ್ನು ತೊರೆದು ಆ ಗುಂಪಿನಲ್ಲಿ ನುಸುಳಿ ಹೆಂಗಸರ ಮೈಮೇಲಿದ್ದ ಒಡವೆಗಳನ್ನೆಲ್ಲ ಕದ್ದು ಮಾಲು ಸಮೇತವಾಗಿ ತನ್ನ ಊರಿಗೆ ಹಿಂತಿರುಗಿ ಅವುಗಳನ್ನು ಭದ್ರವಾಗಿ ಇರಿಸಿ ಸಕಾಲಕ್ಕೆ ಪೋಲೀಸು ಠಾಣೆಯಲ್ಲಿ ಹಾಜರಾಗುತ್ತಿದ್ದನು. ತನ್ನ ಜೀವನವನ್ನೇ ಪಣವಾಗಿಟ್ಟು ಈ ಹುಚ್ಚು ಸಾಹಸವನ್ನು ಕೈ ಕೊಳ್ಳಲು ಅವನಿಗೆ ಧೈರ್ಯ, ಚಾತುರ್ಯ ಮತ್ತು ಚಾಕಚಕ್ಯತೆಗಳು ಎಲ್ಲಿಂದ ಬಂದುವು? ಅವನ ಹಸಿದ ಹೆಂಡತಿ ಮಕ್ಕಳ ಮೇಲಿನ ಪ್ರೀತಿಯೇ ಕಾರಣವೆನ್ನುವುದರಲ್ಲಿ ಕಿಂಚಿತ್ತೂ ಸಂಶಯವಿಲ್ಲ. ಟಿ. ಕೆ. ಸಿ. ಯವರ

ಪ್ರಕಾರ ಪ್ರೀತಿ ಎನ್ನುವುದು ಸದ್ಗುಣದ ಅಂತರಾಳದಲ್ಲಿ ಮಾತ್ರ ಇರುವುದಲ್ಲದೆ ದುರ್ಗುಣದ ಅಡಿಯಲ್ಲಿಯೂ ಇರುವುದೆಂದು ಈ ಕುರಳಿನಲ್ಲಿ ತಿರುವಳ್ಳುವರ್ ಹೇಳಿರುವರು-ಎನ್ನುವರು.



# 6. ಶಬ್ದ ಪೂಜೆ

ಪ್ರಾಚೀನ ಅಥವಾ ಅರ್ವಾಚೀನವಾದ ಯಾವ ಚಿಂತನ-ಪರನೂ ವಳ್ಳುವರಂತೆ ಖಚಿತವೂ ವಿವೇಚನಾಯುಕ್ತವೂ ಆದ ಲಕ್ಷ್ಯವುಳ್ಳ ಶಬ್ದಗಳನ್ನೂ ಆಧ್ಯಾತ್ಮಿಕ ಪ್ರಭೆಯ ಮಾಧ್ಯಮವಾಗಿ ಬಳಸಿಲ್ಲ.

"ಮಾತಿನ ಬಲ್ಮೆ" ಎಂಬ ಅಧ್ಯಾಯದಲ್ಲಿ ವಳ್ಳುವರ್ ಹೇಳುತ್ತಾರೆ :

ಮರು ಸೊಲ್ಲೊಂದು ಇದಿರಿಲ್ಲವೆಂಬುದನರಿತು
ಆ ಸೊಲ್ಲನುದುರಿಸಬೇಕು (645)

ಈ ಕಟ್ಟಳೆಗೆ ಒಳಪಟ್ಟಲ್ಲಿ ಶಬ್ದಗಳನ್ನು ಪ್ರಯೋಗಿಸುವಾಗ ಬಹಳ ಕಠಿಣವೂ ಜಾಗೃತವೂ ಆದ ಒಂದು ಹೊಸ ಶಿಸ್ತನ್ನೇ ಕಲಿಯಬೇಕಾಗುತ್ತದೆ. ಒಂದು ಚಿಂತನೆಯನ್ನು ಶಬ್ದಗಳಲ್ಲಿ ಹಿಡಿದಿಡುವ ಮುನ್ನ ಆ ಚಿಂತನೆಯ ಅಭಿವ್ಯಕ್ತಿಗೆ ಇರುವಂತೆ ತೋರುವ ಭಾಷೆಯ ಎಲ್ಲ ಪರ್ಯಾಯ ಪದಗಳನ್ನೂ ನಮ್ಮ ಮನಸ್ಸಿನ ಕಣ್ಣ ಮುಂದೆ ತಕ್ಕ ಕ್ರಮದಲ್ಲಿ ಅಣಿಮಾಡಿಕೊಳ್ಳಬೇಕು. ಅವುಗಳ ಪರಿಶೀಲನೆಯ ಅನಂತರ, ಆ ಚಿಂತನೆಯ ಸೂಕ್ಷ್ಮಾಂಶಗಳನ್ನು ಅಭಿವ್ಯಕ್ತಿಸಲು ಅಸಮರ್ಥವೆನ್ನಿಸಿದ ಪದಗಳನ್ನು ವರ್ಜಿಸಬೇಕು. ಉಳಿದ ಪದಗಳು ಅಭಿವ್ಯಕ್ತಿಯ ಕ್ರಿಯೆಯಲ್ಲಿ ಪರಸ್ಪರ ಸ್ಪರ್ಧಿಸಲು ಅವಕಾಶವೀಯಬೇಕು. ಕಟ್ಟಕಡೆಯಲ್ಲಿ ಎಲ್ಲ ಪದಗಳನ್ನೂ ಮೀರಿಸಬಲ್ಲ ಆ ಚಿಂತನೆಯ ಸೂಕ್ಷ್ಮಾತಿ ಸೂಕ್ಷ್ಮಗಳನ್ನೆಲ್ಲ ನಿವೇದಿಸಲು ಸೂಕ್ತವಾದ ಪದವನ್ನು ಆರಿಸಿಕೊಳ್ಳಬೇಕು. ಇದೇ ವಳ್ಳುವರು ನಮ್ಮಿಂದ ಅಪೇಕ್ಷಿಸತಕ್ಕದ್ದು. ಈ ಶಬ್ದಗಳ ಆಯ್ಕೆಯಲ್ಲಿ ಆಲೋಚನಾಪರನು ಮೋಹಕವೂ ಅನಿಶ್ಚಿತವೂ ಆದ ಶಬ್ದವನ್ನು ಬಳಸುವುದನ್ನು ಬಿಡಬೇಕು. ಯೌಗಿಕ ಚಿತ್ತೈಕಾಗ್ರತೆಯ ನಿಷ್ಠೆಯಿಂದ ಅನಿವಾರ್ಯವಾದ ಶಬ್ದವನ್ನು ಪತ್ತೆ ಹಚ್ಚಿ ಅದನ್ನು ಬಳಸಬೇಕು. ಚಿಂತನೆ ಮತ್ತು ಭಾಷೆಗಳ ನಡುವೆ ಇರುವ ಆಂತರಂಗಿಕಸಂಬಂಧವನ್ನು ವಳ್ಳುವರು ಚೆನ್ನಾಗಿ ಅರಿತಿದ್ದರು. ಆಲೋಚನೆಯು ಭಾಷೆಯ ಮೇಲೆ ಪ್ರಭಾವ ಬೀರಬಲ್ಲದೆನ್ನುವುದನ್ನು ಅವರು ಬಲ್ಲರು. ಹಾಗೆಯೇ ಅಷ್ಟು ಎಚ್ಚರಿಕೆಯಿಂದಲೂ ಉದ್ದೇಶಪೂರ್ವಕವಾಗಿಯೂ ಶಬ್ದಗಳನ್ನು ಆರಿಸಿಕೊಂಡಾಗ ಆ ಶಬ್ದಗಳಲ್ಲಿ ಶಬ್ದಾತೀತವಾದ ಒಂದು ಅಂಶವು ಅಡಗಿರುವುದೆಂದೂ ಅಂಥ ಶಬ್ದಗಳು ಮೌನವನ್ನು ಪ್ರವೇಶಿಸಲು ಹೆಬ್ಬಾಗಿಲಾಗಬಹುದೆಂದೂ ಅವರು ಬಲ್ಲರು. ಯಾವಾಗ ಮೌನವು ಹುದುಗಿಕೊಂಡಿರುವುದನ್ನು

ಶಬ್ದಗಳು ಪ್ರಕಟಿಸುತ್ತವೆಯೋ ಆಗ ಅವು ಧ್ಯಾನಕ್ಕೆ ಮಾರ್ಗದರ್ಶಕವಾಗುತ್ತವೆ. ಶಬ್ದಗಳ ದುರುಪಯೋಗವನ್ನು ಒಂದು ಅಪವಿತ್ರ ಕಾರ್ಯವೆಂದು ವಳ್ಳುವರು ಭಾವಿಸಿದ್ದರು. ಮಾತುಗಳು ವ್ಯಗ್ರ ಇಲ್ಲವೇ ಕ್ಷುದ್ರ ಮನಸ್ಸಿನ ಅಪಲಾಪವಾಗದೆ ಆತ್ಮಗಹ್ವರದಲ್ಲಿ ಅಡಗಿದ ಮೌನದ ಅಭಿವ್ಯಕ್ತಿಯಾದಾಗ ಅವು ಆಡುವವನು ಮತ್ತು ಆಲಿಸುವವನು ಇಬ್ಬರನ್ನೂ, ಆಧ್ಯಾತ್ಮಿಕ ಜಾಗೃತಿಯ ಸ್ತರವನ್ನು ಸ್ಪರ್ಶಿಸುವಂತೆ ಮೇಲಕ್ಕೆ ಕರೆದೊಯ್ಯುತ್ತವೆ. ಆ ಸಲುವಾಗಿಯೇ ತಿರುವಳ್ಳುವರು, ಮಾತಾಡುವವರು ಶಬ್ದಗಳನ್ನು ಪೂಜ್ಯ ದೃಷ್ಟಿಯಿಂದ ಕಾಣುವುದನ್ನು ಬೆಳೆಸಬೇಕು ಎಂದು ಕರೆಯಿತ್ತಿದ್ದಾರೆ-ಅದೇ ಶಬ್ದಪೂಜೆ.

644 ನೆಯ ಕುರಳಿನಲ್ಲಿ ತಮ್ಮ ಈ ನಂಬಿಕೆಯನ್ನು ಘೋಷಿಸುತ್ತಾರೆ :

ತೆರನರಿದು ಸೊಲ್ಲ ನುಡಿಯಬೇಕು
ನುಡಿಬಲ್ಮೆಗಂ ಮೇಲಾದ
ಧರ್ಮಾರ್ಥಗಳು ಬೇರೆ ಇಲ್ಲ

ಶಬ್ದ ಸಂಯಮವನ್ನು ಪ್ರತಿಪಾದಿಸಿದ ಮಾರ್ಕಸ್ ಅರೆಲಿಯಸ್ ಕೂಡ ಅನಿವಾರ್ಯವಾದ ಶಬ್ದಗಳನ್ನು ಬಳಸುವಾಗ ಇರುವ ಕುಶಲತೆ ಮತ್ತು ಔಚಿತ್ಯ ಜ್ಞಾನಗಳು ಶ್ರೇಷ್ಠ ಮಾನವ ಗುಣದ ಲಕ್ಷಣಗಳನ್ನು ಒಳಗೊಂಡಿವೆಯೆಂದು ಹೇಳುವಷ್ಟು ದೂರ ಹೋಗಲಿಲ್ಲ.

ಸ್ವಯಂ ಅಭಿವ್ಯಕ್ತಿಗಾಗಿ ತೊಳಲಾಡುವ ಪ್ರತಿಯೊಬ್ಬನೂ ಪದಗಳ ಮೇಲೆ ಸಿದ್ಧ ಪ್ರಭುತ್ವವನ್ನು ಪಡೆಯಲಾರನು. ವಳ್ಳುವರು ಪಂಡಿತ ಹಾಗೂ ಅಪಂಡಿತ ಜನರು ತಮ್ಮ ಶಕ್ತಿಗೆ ಮೀರಿದ ಪದಗಳನ್ನು ಬಳಸಲೆಳಸುವ ದುರಂತಾತ್ಮಕ ಹಾಸ್ಯಾಸ್ಪದ ದುರಾಶೆಯನ್ನು ವ್ಯಂಗ್ಯವಾಗಿ ಹೀಗೆ ನಿರ್ದೇಶಿಸಿರುತ್ತಾರೆ :

ಕುಂದಿಲ್ಲದ ಕೆಲ ಮಾತುಗಳನಾಡಲರಿಯದವರು
ಮುಂದಿಲ್ಲದ ಹಲ ಮಾತುಗಳ ಮೋಹದಲಿ ಸಿಲುಕುವರು (649)
ಕಲಿತುದನು ಮನಂಬುಗುವ ತೆರದಿ
ತೆರೆದೊರೆಯಲರಿಯದವರು
ಬಿಂದು ವಾಸನೆಯ ಪಸರಿಸದ
ಹೂದಂಡೆಯನು ಹೋಲುವರು (650)

ತಿರುಕ್ಕುರಳಿನ 'ಸಭಾ ಪರಿಜ್ಞಾನ'ವನ್ನು ಕುರಿತ ಅಧ್ಯಾಯದಲ್ಲಿ ಸಭೆಯ ಇಂಗಿತವನ್ನು ತಿಳಿದು ಮಾತುಗಳನ್ನು ಬಳಸುವವರನ್ನು 'ಶಬ್ದಲಕ್ಷಣ ತಿಳಿದ ಧವ

ಸ್ವರೂಪ' ರೆಂದು (711) ವಳ್ಳುವರು ಕರೆದಿದ್ದಾರೆ. ವಳ್ಳುವರ ಮೇರೆಗೆ ಪದಗಳ ಅರ್ಥವನ್ನು ನಿಕಟವಾಗಿ ತಿಳಿದುಕೊಂಡು ಅವುಗಳನ್ನು ಪ್ರಯೋಗಿಸುವವರು 'ಸೊಲ್ಲಿನ ನಡೆ ತಿಳಿದ ಗುಣವಂತ'ರಾಗುತ್ತಾರೆ (712). ಬಲ್ಲವರ ಸಭೆಯಲಿ ಮುಂದಾಗಿ ನಿಂತು ಮಾತನಾಡಬೇಕು ಎಂದು ಆತುರ ಪಡದಿರುವ ವಿನೀತಗುಣವು ಒಳ್ಳೆಯದೆಂದು ಗುರುತಿಸಿದ ಎಲ್ಲ ಗುಣಗಳಲ್ಲಿಯೂ ಮೇಲಾದುದಾಗಿ (715) ಕಾಣಿಸುತ್ತದೆ." ತಮ್ಮ 716ನೆಯ ಕುರಳಿನಲ್ಲಿ ವಳ್ಳುವರು, ಬಹುಮುಖವಾದ ಅರಿವನ್ನು ಸಂಪಾದಿಸಿದವರ ಕೂಟದಲ್ಲಿ ಶಬ್ದದ ಅಪಪ್ರಯೋಗ ಮಾಡುವವರನ್ನು ಧರ್ಮದ ನೆಲೆ ತಪ್ಪಿದವರೆಂದು ಕರೆದು ಮಾತಿನ ಮಹತ್ವದ ಬಗ್ಗೆ ತಮ್ಮ ಅತೀವ ಕಳಕಳಿಯನ್ನು ತೋಡಿಕೊಂಡಿದ್ದಾರೆ:

ಕುಂದಿಲ್ಲದ ಸೊಲ್ಲನಾಡಬಲ್ಲವರ ಕೂಟದಲಿ
ಕಲಿತರಿತವರ ವಿದ್ಯೆ, ಮಿಂಚಿ ಬೆಳಗುವುದು (717)
ಸತ್ ಸಭೆಯೊಳಗೆ ಮಿಂಚಿ ಮಾತಾಡುವವರು

ಅಜ್ಞಾನಿಗಳ ಕೂಟದಲಿ ಮರೆತೂ ಬಾಯ್ದೆರೆಯದಿರಲಿ (719)

ವಳ್ಳುವರು ವಿವಿಧ ರೀತಿಯ ಸಭೆಗಳಲ್ಲಿ ಉಪನ್ಯಾಸ ಮಾಡಿರಬಹುದು. ತಮ್ಮ ಮಾತುಗಳಿಗೆ ಭಾವಸ್ಪಂದನವಿಲ್ಲದ, ಪ್ರತಿಕ್ರಿಯೆಗಳನ್ನು ತೋರದ ಸಭಿಕರು ವಳ್ಳುವರನ್ನು ಕುಪಿತಗೊಳಿಸಲು ಅವರು ಪಶ್ಚಾತ್ತಾಪಯುಕ್ತವಾದ ಆಕ್ರೋಶದಿಂದ ಹೀಗೆ ಒತ್ತಿ ಹೇಳಿರುತ್ತಾರೆ:

ತನಗೆಣೆಯಿಲ್ಲದವರ ಮುಂದೆ ಗೋಷ್ಠಿಗೊಳುವುದು
ಅಂಗಳದಲಿ ಅಮೃತವನು ಸುರಿದಂತೆ (720)

ಹೈಡ್‌ಪಾರ್ಕಿನಲ್ಲಿ ಕಂಡುಬರುವ ಕೇವಲ ಬೊಬ್ಬೆಯಿಡುವಂತಹ ಭಾಷಣಕಾರರ ಪ್ರಬೇಧ, ಈಗ 2000 ವರ್ಷಗಳ ಮುಂಚೆಯೇ ತಮಿಳುನಾಡಿನ ಸಾರ್ವಜನಿಕ ಜೀವನಕ್ಕೂ ಅಂಟಿ ಬಂದಿರಬಹುದೆ ಎಂದು ಆಶ್ಚರ್ಯವಾಗುತ್ತದೆ. ಏಕೆಂದರೆ ವಳ್ಳುವರು ಕೆಲಸಕ್ಕೆ ಬಾರದ ವ್ಯರ್ಥಾಲಾಪಗಳಿಂದ, ಘೋಷಣೆಗಳಿಂದ ಜನರನ್ನು ದೂರವಿರಿಸುವ ತುರ್ತು ಅಗತ್ಯದ ಬಗ್ಗೆ ಹತ್ತು ಕುರಳುಗಳ ಒಂದು ಇಡೀ ಅಧ್ಯಾಯವನ್ನೇ ಮೀಸಲಿರಿಸಿದ್ದಾರೆ. ಅವರು ತಮ್ಮ ಕಾಲದ ಭಾಷಣಪ್ರಿಯರನ್ನು ಈ ರೀತಿ ಎಚ್ಚರಿಸುತ್ತಾರೆ:

ಬಲ್ಲವರು ನಯವಿಲ್ಲದೆ ಸೊಲ್ಲನಾಡಿದರೂ ಆಡಲಿ
ಫಲವಿಲ್ಲದ ನುಡಿಯನಾಡದಿರುವುದು ಲೇಸು (197)

ಸಾರ್ವಜನಿಕ ವೇದಿಕೆಯ ಮೇಲೆ, ಪೊಳ್ಳು, ಅರ್ಥರಹಿತ, ವಿವೇಚನೆಯಿಲ್ಲದ ಮಾತುಗಳನ್ನಾಡಲು, ಜನರಲ್ಲಿ ವಿಮರ್ಶಾತ್ಮಕ ಪ್ರತಿಕ್ರಿಯೆಯ ಅಭಾವವೇ ಕಾರಣವೆಂದು ವಳ್ಳುವರ್ ತಿಳಿದಿದ್ದರು. ತತ್ಪರಿಣಾಮವಾಗಿ ಅವರು ತಮ್ಮ ಕೋಪವನ್ನು ಉಪನ್ಯಾಸಕರ ಕಡೆಯಿಂದ ಹುಚ್ಚು ಮೆಚ್ಚುಗೆಗಾರರ ಕಡೆಗೆ ತಿರುಗಿಸಿದರು:

ಫಲವಿಲ್ಲದ ಮಾತುಗಳನು ಕೊಂಡಾಡಿ ಸ್ತುತಿಸುವವನು
ಮನುಜಕುಲದವನೆನಬೇಡ, ಪಂಸುಕುಲದಿ ತೋರಿದ
ಜೊಳ್ಳೆಂದೆನಬೇಕು (196)

ಎರಡು ಸಾವಿರ ವರ್ಷಗಳ ಹಿಂದೆ ತಿರುವಳ್ಳುವರಿಂದ ಇಂಥ ನಿಂದೆಗೆ ಗುರಿಯಾದ ತಮಿಳು ಸಮಾಜಕ್ಕೂ ಇಂದಿನ ಅಸಹಜ ಸ್ವಭಾವದ ಪೊಳ್ಳುತನಕ್ಕೂ ಹಲವು ವಿಷಯಗಳಲ್ಲಿ ಸಾಮ್ಯವಿದ್ದಿರಬೇಕೆಂದು ತೋರುತ್ತದೆ.

ಸಾರ್ವಜನಿಕ ಭಾಷಣವೆನ್ನುವುದು ಪ್ರಜಾಪ್ರಭುತ್ವದ ಒಂದು ಸದ್ಗುಣ; ಅದು ಪ್ರಜಾಪ್ರಭುತ್ವದ ಚೌಕಟ್ಟಿನಲ್ಲಿ ಚೆನ್ನಾಗಿ ವರ್ಧಿಸುತ್ತದೆ. ಹತ್ತನೆಯ ಶತಮಾನದ ಉದಿರಮೇರೂರು ಶಿಲಾಶಾಸನವು ತಮಿಳುನಾಡಿನ ಹಲವು ಆಡಳಿತ ಮತ್ತು ಶಾಸಕಾಂಗ ಸಭೆಗಳಿಗೆ ಮತಪೆಟ್ಟಿಗೆಗಳ ಮೂಲಕ ಚುನಾವಣೆಗಳು ನಡೆಯುತ್ತಿದ್ದುದನ್ನು ಉಲ್ಲೇಖಿಸುತ್ತದೆ. ಮತದಾರನು ತಾಳೆಯೋಲೆಯ ಮೇಲೆ ತನ್ನ ಮೆಚ್ಚಿನ ಉಮೇದುವಾರನ ಹೆಸರನ್ನು ಬರೆದು ಅದನ್ನು ಮತಪೆಟ್ಟಿಗೆಯಾಗಿ ಬಳಸುತ್ತಿದ್ದ ಮಡಕೆಗಳಲ್ಲಿ ಹಾಕುತ್ತಿದ್ದನು. ಕ್ರಿ. ಶ. ಮೊದಲನೆಯ ಶತಮಾನದ 'ಅಗನಾನೂರಿ'ನ 77ನೆಯ ಪದ್ಯದಲ್ಲಿ 'ಕುಡವೋಲೈ'ಯ ಪ್ರಸ್ತಾಪವಿದೆ. ('ಕುಡವೋಲೈ' ಎಂದರೆ ಮಡಕೆಗಳಲ್ಲಿ ಹಾಕಲು ಬಳಸುತ್ತಿದ್ದ ತಾಳೆಯೋಲೆಯ ಮತ ಚೀಟಿಗಳು) ಆದ್ದರಿಂದ ವಳ್ಳುವರ ಕಾಲದಲ್ಲಿ ಜನರನ್ನು ತಮ್ಮ ತಮ್ಮ ಮತಗಳಿಗೆ ಆಕರ್ಷಿಸಿ, ಮತಾಂತರಗೊಳಿಸುವುದು ಮಾತ್ರವಲ್ಲದೆ ಮತದಾರರನ್ನು ತಮ್ಮ ಕಡೆಗೆ ಸೆಳೆಯಲು, ಅವರ ಮತಗಳ ಮೇಲೆ ಪ್ರಭಾವ ಬೀರಲು ವಾಗ್ಮಿಗಳ ದೊಡ್ಡ ಸಮೂಹವೇ ತಮಿಳುನಾಡಿನಲ್ಲಿ ಮೆರೆಯುತ್ತಿತ್ತೆಂದು ಇದರಿಂದ ಸ್ಪಷ್ಟವಾಗುತ್ತದೆ.

ವಳ್ಳುವರು ಪ್ರಬಲವಾಗಿ ಖಂಡಿಸಿದ ಅನೇಕ ದೌರ್ಬಲ್ಯಗಳನ್ನು ವ್ಯಕ್ತಪಡಿಸುವ ಭಾಷಣಗಳನ್ನು ಕೇಳಿ ಕುಪಿತರಾದರು. ಶಬ್ದಗಳನ್ನು ಕುರಿತು ತಪಸ್ಸನ್ನೇ ಕೈಕೊಂಡ ತಿರುವಳ್ಳುವರ್ ಶಬ್ದಪ್ರಯೋಗದಲ್ಲಿ ಕಠಿಣವಾದ ಶಿಸ್ತನ್ನು ಪರಿಪಾಲಿಸಬೇಕೆಂದು ಕರೆಯುತ್ತಿರುವುದು ಸೋಜಿಗವೇನಲ್ಲ. ಭಾಷೆಯನ್ನು ಬಳಸುವಲ್ಲಿ ನಿಷ್ಕೃಷ್ಟತೆ ಮತ್ತು ಔಚಿತ್ಯಗಳನ್ನು ಅನುಸರಿಸುವುದಕ್ಕಿಂತಲೂ ಮನುಷ್ಯನಿಗೆ ಮಿಗಿಲಾದ ಆದರ್ಶವಿಲ್ಲವೆಂದು ಸಾರಿ ಹೇಳಿದರು.



# 7. ಇಂದ್ರಿಯಾನುರಾಗ

ತಿರುಕ್ಕುರಳಿನ ಮೂರನೆಯ ಭಾಗವಾದ 'ಕಾಮತ್ತುಪ್ಪಾಲ್' ಇಡೀ ಬದುಕನ್ನು ಪ್ರೇಮದೊಂದಿಗೆ ಬೆಸೆಯುವ ಇಂದ್ರಿಯ ಕಾಮನೆಯ ಕಾವನ್ನು ಕುರಿತುದಾಗಿದೆ. ಆದರೆ ಈ ಭಾಗದಲ್ಲಿಯ ಕುರಳುಗಳಲ್ಲಿ ಪರಸ್ಪರ ಪುಳಕಗೊಳಿಸುವ ಒರಟೊರಟಾದ ದೈಹಿಕ ಪ್ರಧಾನವಾದ ಪರಸ್ಪರ ಉದ್ರೇಕಕ್ಕಿಂತಲೂ ಪ್ರೇಮವು ಉನ್ನತಿಗೇರುತ್ತದೆ. ತಿರುಕ್ಕುರಳಿನ ಮೊದಲ ಎರಡು ಭಾಗಗಳನ್ನು ಅನುವಾದಿಸಿದ, ಶಿಷ್ಟನಾದ ಆಂಗ್ಲನೊಬ್ಬನು ಮೂರನೆಯ ಭಾಗವನ್ನು ಅನುವಾದಿಸಲು ಹಿಂಜರಿದು "ಈ ಭಾಷಾಂತರಕಾರನನ್ನು ಅಪಕೀರ್ತಿಗೆ ಗುರಿಮಾಡದಂತೆ ಯುರೋಪಿನ ಯಾವುದೇ ಭಾಷೆಗೂ ಈ ಭಾಗವನ್ನು ಅನುವಾದಿಸುವುದು ಕಷ್ಟದ ಕೆಲಸ" ಎಂದು ಹೇಳಿದನು. ಮತ್ತೊಬ್ಬ ಆಂಗ್ಲನು ಈ ಹೇಳಿಕೆಯನ್ನು ತಿರಸ್ಕರಿಸಿ "ಈ ಭಾಗದ ಕುರಳುಗಳು ಪ್ರವೃತ್ತಿಯಲ್ಲಿ ಪೂರ್ಣಶುದ್ಧವಾಗಿರುವುದಲ್ಲದೆ ಅವುಗಳ ವಿವೇಕ ತುಂಬಿದ ಉದ್ದೇಶ ಹಾಗೂ ಉನ್ನತಮಟ್ಟದ ರಚನೆಯನ್ನು ನಾನು ಮನಸಾರೆ ಮೆಚ್ಚಿಕೊಂಡಿದ್ದೇನೆ"–ಎಂದಿದ್ದಾನೆ. ಅಂಥ ಭಿನ್ನಾಭಿಪ್ರಾಯವು ಮಾನವನ ಅಸ್ತಿತ್ವದ ಕೇಂದ್ರ ವಿಷಯವನ್ನು ಮರೆಮಾಚುವ ತಪ್ಪು ತಿಳುವಳಿಕೆ ಎಂತಹದೆಂಬುದನ್ನು ನಿರ್ದೇಶಿಸುತ್ತದೆ. ವಳ್ಳುವರು ಲೈಂಗಿಕ ವಿಷಯದಲ್ಲಿ ಹಿತಕರವಾದ ಪೂಜ್ಯಭಾವನೆಯನ್ನು ತಳೆದಿದ್ದರು. ಅದರ ಬಗ್ಗೆ ಅವರಿಗೆ ಯಾವ ಸಂಕುಚಿತ ದೃಷ್ಟಿಯೂ ಇರಲಿಲ್ಲ. ಅವರೇ ಹೇಳುವಂತೆ:

ಹೂವಿಗಿಂ ಹಗುರವೆನಿಸಂವುದೆ ಒಲವು
ಅದರ ಸವಿಯಂಣ್ಬವರು ಕೆಲರು ಮಾತ್ರ (1289)

ತನ್ನ ನಲ್ಲೆಯ ಅನಂತ ವೈವಿಧ್ಯಗಳಲ್ಲಿ ಆತ್ಮಪರವಶನಾದ ಒಬ್ಬ ಪ್ರೇಮಿಯು ಚಿತ್ತಾಕರ್ಷವೂ, ಸ್ಮರಣೀಯವೂ ಆದ ತನ್ನ ಪ್ರತಿಸ್ಪಂದನಗಳನ್ನು ಹೀಗೆ ವ್ಯಕ್ತಪಡಿಸಿರುವನು:

ಅರಿತಂತೆಲ್ಲ ಅಜ್ಞಾನವನು ಕಂಡ ತೆರದಿ
ಈ ಎಳೆವೆಣ್ಣಿನ ಕೂಟದಲಿ, ಮತ್ತು
ಮತ್ತು ಕೂಡದಿರುವ ಭಾವನೆಯೆ ತೋರುವುದಂ (1110)

ಇಂದು ಗಳಿಸಿದ ಹೊಸ ಜ್ಞಾನವು ನಿನ್ನೆಯ ನಮ್ಮ ಅಜ್ಞಾನವನ್ನು ಪ್ರಕಟಿಸುದೆಂಬ ಭಾವವನ್ನು ಯೋಗಿ ವಳ್ಳುವರ್ ಅವರು ಪ್ರಣಯ ಪ್ರಪಂಚಕ್ಕೆ ಅತ್ಯಾ

ಶ್ಚರ್ಯಕರವಾಗಿ ಅನ್ವಯಿಸಿರುವರು. ಅನ್ವೇಷಣಾರ್ಥವಾಗಿ ಪ್ರವಾಸವನ್ನು ಕೈಕೊಂಡು ಪ್ರಣಯಿಯು ಅಂದಂದಿನ ಸುಖಾನುಭವವನ್ನು ಹಿಂದಿನ ದಿನದ ಸುಖಾನುಭವದೊಂದಿಗೆ ಹೋಲಿಸಿ ನೋಡಿದರೆ ಮೊದಲಿನದು ಸವಿಯಲ್ಲವೆಂದು ಕಂಡುಕೊಳ್ಳುತ್ತಾನೆ.

ಕಾದಲ ಕಾದಲೆಯರು ಉನ್ಮತ್ತರಾಗಿ ಅತಿ ನಿಕಟವರ್ತಿಗಳಾಗಿದ್ದಾರೆ. ಆಗ ಕಾದಲನು ಹೇಳುತ್ತಾನೆ:

ಕಂಡುಂಡು, ಕೇಳಿ, ಮುಟ್ಟಿ, ವಾಸನೆಯ ಸವಿದು
ನಲಿವ ಐದಿಂದ್ರಿಯಗಳ ಸುಖವು
ಈ ಮಿನುಗು ಬಳೆಗಳ ಚೆಲುವೆಯಲಿ
ನೆಲೆಗೊಂಡಿವೆ (1101)

ಇಂಥ ಸಮಾಗಮದಲ್ಲಿ ಭೋಗ-ಭೋಗಿಗಳಲ್ಲಿ ಅಂತರವೇ ಇಲ್ಲ. ಸಹಜ ವಾಗಿಯೇ ವಿಷಯಾನುರಕ್ತಿಯನ್ನು ಹಾಯ್ದು ಅತೀತ ಪ್ರಜ್ಞಾವಸ್ಥೆಯನ್ನು ತಲುಪಿದ ನಲ್ಲನು ಹೀಗೆ ಪ್ರಶ್ನಿಸುತ್ತಾನೆ :

ತಾನೊಲಿದ ಎಳೆವೆಣ್ಣ ನಳಿದೋಳ್ಗಳ ಲಿ
ಒರಗಿ ಪಡೆವ ಸುಖನೆಲೆಯಿಂ ತಾವರೆಗಣ್ಣನ
ಲೋಕವದು ಮೇಲೋ? (1103)

ವಳ್ಳುವರು ತಮ್ಮ ವರ್ಣದರ್ಶಕ ಸಾಧನವನ್ನು ಅತ್ತಿತ್ತ ತಿರುಗಿಸಿ ಸದಾ ಪರಿವರ್ತನಶೀಲವಾದ ಪ್ರಣಯದ ವಿವಿಧ ಬಗೆಗಳನ್ನು ನೋಡುವಂತೆ ನೆರವಾಗು ತ್ತಾರೆ. ವಿದೇಶ ಪಯಣಕ್ಕೆ ಹೊರಟು ಸಿದ್ಧನಾದ ನಲ್ಲನು ತನ್ನ ನಲ್ಲೆಯಿಂದ ಬೀಳ್ಕೊಳ್ಳಲು ಅವಳ ಬಳಿಗೆ ಬರುತ್ತಾನೆ. ಬರಲಿರುವ ಅಗಲಿಕೆಯನ್ನು ಸಹಿಸ ಲಾರದೆ ಅವಳು ಯಾತನೆಯಿಂದ ಹೀಗೆ ಹಲುಬುತ್ತಾಳೆ:

ಅಗಲದಿರುವ ನಿರ್ಧರವಿದ್ದರೆನಗೆ ಹೇಳು
ಅಗಲಿ ಒಡನೆಯೆ ಬರುವೆಯೆಂದುಸುರಲಿಚ್ಛಿಸಿ-
ದರೂ, ಉಸಿರೊಡನೆ ಇರುವವರಿಗೆ ಹೇಳು! (1151)

ಹೋಮಿಯೋಪಥಿ ವೈದ್ಯ ಪದ್ಧತಿಯಲ್ಲಿ, ಅಲೋಪಥಿ ವೈದ್ಯ ಪದ್ಧತಿಗೆ ವ್ಯತಿರಿಕ್ತವಾಗಿ ರೋಗಿಯ ವ್ಯಾಧಿಯನ್ನು ಗುಣಪಡಿಸಲು ರೋಗಜನಕ ಔಷಧಿ ಗಳನ್ನು ಪ್ರತ್ಯೌಷಧವಾಗಿ ಬಳಸುತ್ತಾರೆ. ತಿರುವಳ್ಳುವರು ಚಿತ್ರಿಸಿದ ಪ್ರಣಯಿನಿಗೆ ಎರಡು ಪದ್ಧತಿಯ ಸೂತ್ರಗಳೂ ತಿಳಿದಿರುವಂತಿದೆ. ಅವನು ತನ್ನ ಕಾಮಿನಿಯನ್ನು ಕುರಿತು ಹೇಳುತ್ತಾನೆ:

ನೋವಿಗುಪಶಮನವು ಪ್ರತಿಗುಣವ ಪಡೆದಿರುವುದು
ಒಡವೆಗಳ ಬೆಡಗಿಯಿವಳೋ ತಾನುಂಟುಮಾಡಿದ ನೋವಿಗೆ
ತಾನೆ ಉಪಶಮನವಾಗುವಳು (1102)

ಅವನು ಮುಂದುವರಿದು ಹೇಳುತ್ತಾನೆ:

ಸೊಬಗಿಯಿವಳೊಡನೆನ್ನ ಬೆಸುಗೆಯು
ಒಡಲು ಉಸುರುಗಳ ನಡುವೆ ಎಂತೋ ಅಂತೆ (1122)

ವಿರಹಿಣಿಯೊಬ್ಬಳು ತನ್ನ ಸಖಿಗೆ ಹೇಳುತ್ತಾಳೆ:

ಕಿಚ್ಚು ತನ್ನ ಸೋಕೆ ಸುಡುವುದಲ್ಲದೆ
ಕಾಮವೇದನೆಯಂತೆ ಅಗಲಿ
ದೂರದಲಿರ್ಪವರನು ಸುಡುವುದೆ? (1159)

ನಲ್ಲೆಯು ತನ್ನ ನಿದ್ರೆಯಲ್ಲಿ ಸದಾ ತನ್ನ ಕಾದಲನ ಕನಸನ್ನು ಕಾಣುತ್ತಿರುತ್ತಾಳೆ. ಆದರೆ ಅವಳು ಎಚ್ಚರವಾದೊಡನೆಯೇ ಆ ಕನಸು ವ್ಯಗ್ರವಾಗಿ ಭಂಗವಾಗುತ್ತದೆ. ಅವಳ ಅಸಹನೀಯವಾದ ಅಗಲಿಕೆ ಪುನಃ ಮನವರಿಕೆಯಾಗುತ್ತದೆ:

ನನಸೆಂಬ ನೆಲೆಯೊಂದು ಇಲ್ಲವೆನಿಸಿದರೆ
ಕನಸಲ್ಲಿ ಕಾದಲನೆನ್ನ ಎಂದೂ ತೊರೆದಗಲನು (1216)

ತನ್ನ ಜೀವನೋಪಾಯಕ್ಕಾಗಿ ಬಹಳ ದೂರದ ವಿದೇಶಕ್ಕೆ ಹೋಗಿರುವ ಇನಿಯನನ್ನು ನೆನೆಸಿಕೊಳ್ಳುತ್ತ ಮನದನ್ನೆ ಹೀಗೆ ದೂರುವಳು:

ಕಣ್ಮುಚ್ಚಿ ಕನಸಿನಲ್ಲಿ ನನ್ನ ತೋಳಮೇಲೊರಗಿನವರು
ಕಣ್ಣ ಬಿಟ್ಟೊಡನೆಯೆ ನನ್ನ ಹೃದಯದಲ್ಲಡಗುವರು (1218)

ವಿವಾಹಪೂರ್ವ ಪ್ರೇಮದ ವಿವಿಧ ಮನೋಭಾವಗಳನ್ನು ಅತ್ಯಂತ ತೀವ್ರವಾಗಿ ವಳ್ಳುವರು ಚಿತ್ರಿಸಿದ್ದಾರೆ. ಸಾವಿರಾರು ಸಮರಗಳಲ್ಲಿ ಹೋರಾಡಿದ ವೀರನಬ್ಬ ನೊಬ್ಬಡ ನಡುವಿನ ಬೆಡಗಿಯೊಬ್ಬಳಲ್ಲಿ ಅನುರಕ್ತನಾಗುತ್ತಾನೆ. ಅವಳನ್ನು ಕಂಡ ಮಾತ್ರಕ್ಕೆ ಅವನ ಕಲ್ಲೆದೆಯ ಕಲಿತನವೆಲ್ಲ ಕುಗ್ಗಿಹೋದುದನ್ನು ತಿಳಿಯುತ್ತಾನೆ. ಅವನು ಹೀಗೆ ದೂರುತ್ತಾನೆ :

ಹೋರ್ಕಳದಲಿ ಹಗೆಯ ಗುಡುಗುಟ್ಟಿಸುವೆನ್ನ ಪೌರುಷವು
ಇವಳ ಹೊಳಪಿನ ನೊಸಲ ಕಂಡು ಕಂಪಿಸುತ್ತಿಹುದಂ (1088)

ಮೊದಲ ನೋಟಕ್ಕೆ ನಾಚುತ್ತಿದ್ದ ಕಾಮಿನಿಯೊಬ್ಬಳು ಕೊನೆಕೊನೆಗೆ ಕಾದಲನ

ಪ್ರಣಯ ಸಲ್ಲಾಪಗಳಿಗೆ ಪರವಶಳಾದಳು. ಕೆಲ ಸಮಯದ ಒಳಿಕ ಪ್ರಣಯ ಸಲ್ಲಾಪವನ್ನು ನೆನೆಸಿಕೊಳ್ಳುತ್ತ ಚೋದ್ಯಗೊಳ್ಳುತ್ತಾಳೆ;

ಹಲವು ಮಾಯೆಗಳನು ಬಲ್ಲ ಇನಿಯನ
ಶರಣಾಗತಿಯ ಮೆಲುನುಡಿಗಳೆ
ಹೆಣ್ತನದ ಸಂಯಮದ ಕೋಟೆಯನ್ನು
ಬೇಧಿಸುವ ಅಸ್ತ್ರ (1258)

ದೀರ್ಘಾವಧಿಯ ಅಗಲಿಕೆಯ ಅನಂತರ ಇಬ್ಬರು ಪ್ರಣಯಿಗಳು ಮೊದಲ ಬಾರಿಗೆ ಸಂಧಿಸಲು, ತನ್ನ ನಲ್ಲನು ಭೇಟಿಯಾಗದುದಕ್ಕಾಗಿ ನಲ್ಲೆಯು ಕುಪಿತಳೂ, ನೊಂದವಳೂ ಆಗಿ, ಕೂಡಲೇ ಅಳತೊಡಗುವಳು.

ಬೆಂಕಿಯಲಿ ಕೊಬ್ಬನು ಇಟ್ಟಂತಿರುವ
ಹೃದಯವುಳ್ಳವರಿಗೆ
ಕೂಡಿಕಲಹವಾಡಿ ದೂರವಿರುವೆನೆಂಬ
ಎದೆಗಾರಿಕೆಯುಂಟೆ? (1260)

ತನ್ನ ಪ್ರಿಯನ ಪ್ರೇಮ ತನ್ನ ಪ್ರೇಮದಷ್ಟು ಗಾಢವಾಗಿಲ್ಲವೆಂದು ಒಬ್ಬ ಹೆಣ್ಣು ಸಂಶಯಪಡುತ್ತಾಳೆ. ತನ್ನ ಹೃದಯವನ್ನೇ ಸಂಬೋಧಿಸಿ ಅವಳು ಹೀಗೆ ಹೇಳುತ್ತಾಳೆ:

ಅವರ ಹೃದಯವು ಅವರ ಬಿಟ್ಟಗಲದಿರುವುದ ಕಂಡೂ
ಓ ಹೃದಯವೇ! ನೀನೇಕೆ ನನ್ನ ಬಿಟ್ಟೋಡುತಿರುವೆ
ಅವರ ಬಳಿಗೆ? (1291)

ಇನಿಯನೂ ತನ್ನ ಪಾಲಿಗೆ ಪಡುವ ವೇದನೆ ಅಲ್ಪವೇನಲ್ಲ. ತನ್ನ ಯಾತನೆಯನ್ನು ಅವನು ಈ ಕೆಳಗೆ ಕಂಡಂತೆ ವ್ಯಕ್ತಪಡಿಸುತ್ತಾನೆ :

ಕಾಲನಾರೆಂಬುದನು ನಾನು ಕಂಡರಿಯೆನು
ಹೋರಾಟಕ್ಕೆರಗುವ ಕಣ್ಣು ಪಡೆದಿಹ
ಹೆಣ್ತನರೂಪವ ತಾಳಿಹುದೆಂಬುದನು
ಈಗ ಕಂಡರಿತೆನು! (1083)

ನಾಚಿಕೆಯಿಂದ ಕೆಂಪಡರಿದ ತನ್ನ ಮನದನ್ನೆಯ ಮುಖವನ್ನು ನೆನೆದು ಕೊಳ್ಳುತ್ತ ಅವನು ಹೇಳುತ್ತಾನೆ:

ಎರಲೆಯ ಎಳೆನೋಟವನು, ಲಜ್ಜೆಯನು
ಸಿಂಗರಿಸಿಕೊಂಡಿರುವೀ ತರಳೆಯನು
ಒಡವೆಗಳ ಭಾರದಲಿ ಸಿಂಗರಿಸಲೇಕೆ? (1089)

ಅವನು ತನ್ನ ನಲ್ಲೆಯ ಸವಿಯಾದ ಸಣ್ಣ ಪುಟ್ಟ ಹಾವಭಾವಗಳನ್ನು ನೆನೆದಂತೆಲ್ಲ ಅವನ ಪ್ರೇಮ ಪುಷ್ಟವಾಗುವುದು. ಅವನು ಹೀಗೆ ಸ್ಮರಿಸಿಕೊಳ್ಳುವನು:

ನೋಡಿದಳು, ನೋಡಿ ನಾಚಿ ತಲೆ ಕುಸಿದಳು
ಅದವಳು ನಮ್ಮ ಪ್ರೇಮಲತೆಗೆರೆವ ನೀರು (1083)

ಅವಳು ತೋರಿದ ನಾಚಿಕೆಯು, ತನ್ನ ಗಮನವನ್ನು ಅವಳೆಡೆಗೆ ಸೆಳೆಯಲು ಹೂಡಿದ ಸಂಚು ಎಂದು ಅವನಿಗೆ ಕಂಡುಬಂದಿತು:

ನಾ ನೋಡುತಿರೆ ತಾ ನೆಲವ ನೋಡುವಳು
ನಾ ನೋಡದಿರೆ ತಾ ನೋಡಿ ಕುಡಿನಗೆಯ
ಚಿಮ್ಮುವಳು (1084)

ಹೆಣ್ಣು ಮತ್ತು ಅಸೂಯೆಗಳು ಅವಳಿ ಸಹೋದರಿಯರು. ಅನುರಕ್ತಳಾದ ಹೆಣ್ಣು ತನ್ನ ಇನಿಯನನ್ನು ಕೇವಲ ತನಗಾಗಿಯೇ ಪಡೆಯಲು ಆಶಿಸುವಳು. ಆದರೆ ಅವನ ಸೌಂದರ್ಯವನ್ನು ಹೀರುವ ಇತರ ಹೆಣ್ಣುಗಳ ಕಣ್ಣಿಗೂ ಅವನು ಬೀಳುವುದನ್ನು ಕಾಣುವಳು. ಅದು ಅವಳ ಅಸೂಯೆಯನ್ನು ಹೊಡೆದೆಬ್ಬಿಸುತ್ತದೆ ಅವಳ ಅಸಮಾಧಾನ ವ್ಯಕ್ತವಾಗುವ ರೀತಿ ಇದು:

ಕಾಮಿನಿಯರೆಲ್ಲ ಕೂಡಿ, ಕಣ್ಗಳಿಂ
ನಿನ್ನಯ ಚೆಲುವ ಭೋಗಿಸುವರು
ಸೇರಲಾರೆನು ನಿನ್ನೆದೆಯನದರಿಂ ಪರಕಾಮಿಯೆ (1311)

ಕಾಮಿನಿಯು ತನ್ನ ಇನಿಯನ ಅಗಲಿಕೆಯಲ್ಲಿ ಅವನ ದೋಷಗಳನ್ನು ಮಾತ್ರವೇ ನೆನೆಯುವಳು. ಆದರೆ ಅವನನ್ನು ಕಂಡೊಡನೆಯೇ ಆ ದೋಷಗಳೆಲ್ಲ ಕರಗಿಹೋಗುವುವು.

ಇದು ಒಂದು ರೀತಿಯ ಮಾನಸಿಕ ವಿರೋಧಾಭಾಸವೇ ಸರಿ!

ಪ್ರಿಯತಮನು ಬಳಿಯಲಿರೆ, ದೋಷವನೆ
ನಾ ಕಂಡರಿಯೆನು!
ಅವರ ನೋಟವು ತಪ್ಪಿದ ಬಳಿಕ, ದೋಷವಲ್ಲದೆ
ಬೇರೇನೂ ನಾ ಕಂಡರಿಯೆನು! (1286)

ತನ್ನ ಇನಿಯನ ಅಗಲಿಕೆಯಲ್ಲಿ ತಾನು ಹೇಗೆ ಬದುಕಿ ಉಳಿದಿದ್ದೇನೆಂಬುದಕ್ಕೆ ಅವಳು ವಿಚಿತ್ರವಾದ ಕಾರಣವನ್ನು ಕೊಡುತ್ತಾಳೆ:

ಅವರ ಕೂಡಿದ ದಿನಗಳನೆಣಿಸುತ್ತ
ನಾ ಉಸಿರ ಹಿಡಿದಿರುವೆ
ಮತ್ತೆ ನಾ ಹೇಗೆ ಬದುಕಿರಲಿ? (1206)

ಪ್ರಿಯತಮನಾದರೋ ತನ್ನ ಮನದನ್ನೆಯ ಅಸೂಯೆಯನ್ನು ಈ ಕೆಳಗೆ ಕಂಡ ಪದಗಳಲ್ಲಿ ಪ್ರಕಟಗೊಳಿಸುತ್ತಾನೆ:

'ಬೇರಾರಿಗಿಂತಲೂ ನಿನ್ನನಧಿಕ ಪ್ರೀತಿಸುವೆ'
ಎಂದೆ ನಾನು
'ಯಾರಿಗಿಂತ! ಯಾರಿಗಿಂತ!' ಎಂದೆನುತ
ತನ್ನ ಮುನಿಸ ಪ್ರಕಟಿಸಿದಳು! (1314)

ಈ ಅಸೂಯಾಪರಳಾದ ಹೆಣ್ಣು ತನ್ನಿನಿಯನ ಅಗಲಿಕೆಯ ಸಮಯದಲ್ಲಿ ತನ್ನ ಪ್ರಿಯತಮನ ಸಂದೇಶವನ್ನು ಹೊತ್ತು ತಂದ ದೂತನನ್ನು ಕನಸಿನಲ್ಲಿ ಕಂಡು ಎಚ್ಚರ ವಾಗುತ್ತಾಳೆ. ಆ ಕನಸಿಗೆ ತನ್ನ ಕೃತಜ್ಞತೆಗಳನ್ನು ವ್ಯಕ್ತಪಡಿಸುವ ಆಸೆಯಿಂದ ಹೀಗೆ ನುಡಿಯುತ್ತಾಳೆ:

ಪ್ರಿಯತಮನ ಸಂದೇಶ ಹೊತ್ತು ತಂದಿಹ
ಕನಸಿಗೆ
ಯಾವ ಬಗೆಯಲಿ ಸಮ್ಮಾನವನು ಮಾಡಲಿ
ನಾನು (1211)

ಈ ರೀತಿ ಕಾಮಭಾಗದಲ್ಲಿರುವ (ಕಾಮತ್ತುಪ್ಪಾಲ್) ಕುರಳುಗಳು ಇಂದ್ರಿಯಾನುರಾಗದ ಸಾಧ್ಯವಿರುವ ಎಲ್ಲ ಮುಖಗಳನ್ನೂ ಮತ್ತು ಅದರ ಸ್ವಭಾವನ್ನೂ ಕನ್ನಡಿ ಹಿಡಿದು ಪ್ರತಿಬಿಂಬಿಸುತ್ತವೆ.



# 8. ತಿರುಕ್ಕುರಳಿನ ಶಿಲ್ಪವೈಭವ

ಹತ್ತು ಹತ್ತು ಕುರಳುಗಳಿರುವ 133 ಅಧ್ಯಾಯಗಳನ್ನೊಳಗೊಂಡ ತಿರುಕ್ಕುರಳಿನ ಶಿಲ್ಪಕೌಶಲವನ್ನು ಅಭ್ಯಾಸ ಮಾಡುವುದು ಆಪ್ಯಾಯಮಾನಕರವಾದ ವಿಷಯ. ಈ ನೂರ ಮೂವತ್ತುಮೂರು ಅಧ್ಯಾಯಗಳನ್ನು ಮೂರು ಪ್ರಮುಖ ಶೀರ್ಷಿಕೆಗಳಲ್ಲಿ ವರ್ಗೀಕರಿಸಲಾಗಿದೆ. ಮೊದಲ ಭಾಗದ ಶೀರ್ಷಿಕೆ 'ಅರತ್ತುಪಾಲ್' ಎಂದರೆ ಧರ್ಮ ಅಥವಾ ಕರ್ತವ್ಯವನ್ನು ಕುರಿತ ವಿಷಯಗಳನ್ನು 380 ಕುರಳುಗಳಲ್ಲಿ ವಿಷದಪಡಿಸಲಾಗಿದೆ. ಎರಡನೆಯ ಭಾಗ 'ಪೊರುಟ್ಪಾಲ್'-ಎಂದರೆ ಅರ್ಥನೀತಿಗೆ ಸಂಬಂಧಿಸಿದ 700 ಕುರಳುಗಳು ಇದರಲ್ಲಿವೆ. ಮೂರನೆಯ ಹಾಗೂ ಕೊನೆಯ 'ಕಾಮತ್ತುಪ್ಪಾಲ್'-ಇಂದ್ರಿಯಾನುರಾಗವನ್ನು ಕುರಿತ 250 ಕುರಳುಗಳನ್ನು ಪಡೆದಿದೆ. ಸಂಸ್ಕೃತದಲ್ಲಿರುವ ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳ ಕಲ್ಪನೆಯ ಆಧಾರದ ಮೇಲೆ ಕುರಳ್ ರಚಿತವಾಗಿದೆಯೆಂದು ಬಹುಮಂದಿ ವಿಮರ್ಶಕರು ಯಾವೊಂದು ಪ್ರಮಾಣವೂ ಇಲ್ಲದ ಊಹೆಯ ಮೇಲೆ ಕುರಳನ್ನು ವಿವರಿಸ ಹೋಗುತ್ತಾರೆ. ಈ ಅಭಿಪ್ರಾಯವನ್ನು ಪ್ರತಿಪಾದಿಸಹೊರಟವರು ತಿರುವಳ್ಳುವರು ಮೋಕ್ಷವನ್ನು ಕುರಿತು (ತಮಿಳಿನಲ್ಲಿ 'ವೀಡು' ಇದಕ್ಕೆ ಸಮಾನಪದ) ಏಕೆ ಹೇಳಲಿಲ್ಲ ಎಂಬುದನ್ನು ವಿವರಿಸಲು ಅಸಮರ್ಥರಾಗಿದ್ದಾರೆ. ಒಬ್ಬ ಕ್ರೈಸ್ತಮತ ಪ್ರತಿಪಾದಕರು "ತಿರುವಳ್ಳುವರು ಮೋಕ್ಷ ಅಥವಾ ವೀಡನ್ನು ಕೈ ಬಿಡಲು ಕಾರಣ ವೇನೆಂದರೆ ಬಹುಶಃ ತಮಿಳುನಾಡಿನ ಜನರು ಈ ಉನ್ನತವಾದ ಕೈವಲ್ಯಮಾರ್ಗವನ್ನು ಹೊಂದಲು, ತಿರುವಳ್ಳುವರ ದೃಷ್ಟಿಯಲ್ಲಿ ಅರ್ಹರಾಗಿಲ್ಲವೇನೋ"-ಎಂಬ ವ್ಯಂಗ್ಯ ಅಭಿಪ್ರಾಯವನ್ನು ಮಂಡಿಸುವಷ್ಟು ದೂರ ಸಾಗಿದ್ದಾರೆ. ಮತ್ತೆ ಕೆಲವರು ತಿರುವಳ್ಳುವರು ಧರ್ಮ, ಅರ್ಥ, ಕಾಮಗಳನ್ನು ಪ್ರತಿಪಾದಿಸುವಲ್ಲಿಯೇ ಮೋಕ್ಷವೂ ಸಹಜವಾಗಿಯೇ ಲಭ್ಯವಾಗುತ್ತದೆಯಾದುದರಿಂದ ಉದ್ದೇಶಪೂರ್ವಕವಾಗಿಯೇ ಅದನ್ನು ಬಿಟ್ಟಿರಬಹುದೆಂದು ಅರ್ಥೈಸುತ್ತಾರೆ. ತಿರುವಳ್ಳುವರು ವಾಸ್ತವಿಕ ಸಂಗತಿಗಳನ್ನು ಮಾತ್ರವೇ ಪರಿಗಣಿಸಲು ನಿರ್ಣಯವನ್ನು ತೆಗೆದುಕೊಂಡು ವೀಡು ಅಥವಾ ಮೋಕ್ಷವನ್ನು ವಿವರಿಸದೆ ಹೋಗಿರಬಹುದೆ ಎಂದು ಜಿ. ಯು. ಪೋಪ್ ಅಚ್ಚರಿಯನ್ನು ವ್ಯಕ್ತಪಡಿಸಿದ್ದಾರೆ. ಬಹುಶಃ ವಳ್ಳುವರು ಮಾನವನ ಭವಿತವ್ಯವನ್ನು ಕುರಿತು ಪಡೆದ ಅವಲೋಕನದಲ್ಲಿ ಅವರಿಗೆ ಅಷ್ಟಾಗಿ ತೃಪ್ತಿದಾಯಕವಾಗಿರದೆ ಹೊಸ ಆಶಾಕಿರಣದ ಬೆಳಕಿಗಾಗಿ ನಿರೀಕ್ಷಿಸುತ್ತಿದ್ದಿರಬಹುದು ಎಂದೂ ಅನುಮಾನ ಪಟ್ಟಿದ್ದಾರೆ. ತಿರುವಳ್ಳುವರು ಮಾಡಿಕೊಂಡ ವರ್ಗೀಕರಣವು ಸಂಸ್ಕೃತದಲ್ಲಿರುವ

ವರ್ಗೀಕರಣಕ್ಕಿಂತ ಎಲ್ಲ ರೀತಿಯಲ್ಲೂ ಭಿನ್ನ ಸ್ವಭಾವದ್ದು ಎಂದು ತೀರ್ಮಾನಿಸುವುದೇ ಸರಿಯಾದ ಮಾರ್ಗ ಎಂದೆನಿಸುತ್ತದೆ. ಧರ್ಮಶಾಸ್ತ್ರಗಳಲ್ಲಿ ಹೇಳಿರುವ, ತಿರುವಳ್ಳುವರು ಪ್ರತಿಪಾದಿಸಿರುವ ಅರಮ್ ಭಾಗದ ವಸ್ತುವು ಧರ್ಮಶಾಸ್ತ್ರಗಳಲ್ಲಿ ಹೇಳಿರುವಂತೆ, ತಿರುವಳ್ಳುವರು ಬೇರೆ ಬೇರೆ ಜಾತಿಗಳವರಿಗೆ ಬೇರೆ ಬೇರೆ ಧರ್ಮಗಳನ್ನು ನಿಯಮಿಸಲು ಹೋಗುವುದಿಲ್ಲ. ಅವರ 'ಅರಮ್' ಕಲ್ಪನೆಯು ಸರ್ವಮಾನ್ಯ ಗುಣವುಳ್ಳದ್ದು. ವ್ಯಕ್ತಿಯೊಬ್ಬನು ತನ್ನ ವಿಕಾಸದ ವಿವಿಧ ಹಂತಗಳಲ್ಲಿ ಅನುಸರಿಸ ಬೇಕಾದ ಬೇರೆ ಬೇರೆ ಕರ್ತವ್ಯಗಳನ್ನು ಅವರು ವಿಧಿಸುತ್ತಾರೆ. ತನ್ನ ಕುಟುಂಬದ ಸದಸ್ಯನಾಗಿ, ತಂದೆ–ತಾಯಿ, ಹೆಂಡತಿ-ಮಕ್ಕಳಿಗೆ ಸಂಬಂಧಿಸಿದಂತೆಯೂ ತನ್ನ ಸಮುದಾಯದ ಸದಸ್ಯನಾಗಿ ಸಮಾಜದಲ್ಲಿರುವ ಶಿಷ್ಟ, ದುಷ್ಟ ಮತ್ತು ಉದಾಸೀನ ಭಾವದ, ಎಲ್ಲ ಸಹಜೀವಿಗಳಿಗೆ ಸಂಬಂಧಿಸಿದಂತೆಯೂ ರಾಷ್ಟ್ರದ ಪೌರನಾಗಿ ಆಳುವ ಅರಸನಿಗೆ ಸಂಬಂಧಿಸಿದಂತೆಯೂ ಒಬ್ಬ ವ್ಯಕ್ತಿಯ ಕರ್ತವ್ಯಗಳೇನೆಂಬುದನ್ನು ಅವರು ವಿಧಿಸುತ್ತಾರೆ. ಈ ಎಲ್ಲ ಸಂಬಂಧಗಳಲ್ಲಿಯೂ ಅವನು ಪ್ರೇಮ ಭಾವನೆಯನ್ನು ವ್ಯಕ್ತಪಡಿಸಿ ಸರಿಯಾದ ಕಾರ್ಯದಲ್ಲಿ ತೊಡಗಬೇಕಾಗುತ್ತದೆ.

ಇದರಿಂದ ವಳ್ಳುವರ 'ಅರಮ್' ಎನ್ನುವುದು ಶುದ್ಧವಾಗಿ ತಮಿಳರ ಭಾವನೆಯನ್ನು ನಿರ್ದೇಶಿಸುವುದರಿಂದ ಸಂಸ್ಕೃತ 'ಧರ್ಮ'ದ ಪರಿಕಲ್ಪನೆಗೂ ಇದಕ್ಕೂ ಯಾವ ಸಮಾನಾಂಶವೂ ಇಲ್ಲವೆನ್ನುವುದು ವ್ಯಕ್ತವಾಗುತ್ತದೆ.

ತಿರುವಳ್ಳುವರ 'ಪೊರುಟ್ಪಾಲ್' ಕೂಡ, ಸಂಸ್ಕೃತದ ಅರ್ಥದ ಕಲ್ಪನೆಗೆ ಸಮಾನವೆನ್ನಿಸುವುದಿಲ್ಲ. ಅರ್ಥಶಾಸ್ತ್ರವು ಪ್ರಧಾನವಾಗಿ ರಾಜನೀತಿಯನ್ನು ಕುರಿತು ವಿವರಿಸುತ್ತದೆ. ರಾಜ್ಯ ನೀತಿ ಮತ್ತು ಪ್ರಭುತ್ವಗಳನ್ನು 'ಪೊರುಟ್ಪಾಲಿ'ನಲ್ಲಿ ಕೆಲವು ಅಧ್ಯಾಯಗಳಲ್ಲಿ ಮಾತ್ರ ವಿವರಿಸಲಾಗಿದೆ. ಅಲ್ಲದೆ ಅರಸನನ್ನು ಕುರಿತು ಕುರಳಿನಲ್ಲಿ ಉಲ್ಲೇಖಿಸುವಾಗಲೆಲ್ಲ ಅದು ಯಾವ ರೀತಿಯ ದೈವಿಕ ಅಧಿಕಾರವೂ ಇಲ್ಲದ ಅರಸನನ್ನು ಕುರಿತುದಾಗಿದೆ. ಅವನು ಧರ್ಮವನ್ನು ಬಿಡಬಾರದು ಮತ್ತು ದುರ್ವ್ಯಸನಗಳಿಂದ ದೂರವಾಗಿರಬೇಕೆಂದು ಮಾತ್ರ ಹೇಳಿದೆ. ಪ್ರಭುವಾದವನು ಪ್ರಜೆಗಳ ಆದರ್ಶ ಮತ್ತು ಸದ್ಗುಣಗಳ ಪ್ರತೀಕವೆಂದು ಚಿತ್ರಿಸಿದೆ. ಸ್ವಾಭಿಮಾನ, ಪ್ರಾಮಾಣಿಕತೆ, ಉತ್ತಮ ನಡತೆ, ಪೌರ ಮರ್ಯಾದೆ ಮತ್ತು ಸಾಮಾಜಿಕ ವ್ಯವಸ್ಥೆಯಲ್ಲಿ ವ್ಯಕ್ತಿ ವ್ಯಕ್ತಿಗಳ ಸಂಬಂಧವನ್ನು ಉಳಿಸಿಕೊಂಡು, ಉತ್ತಮಪಡಿಸಿಕೊಳ್ಳಲುಬೇಕಾದ ವಿಶಿಷ್ಟ ಗುಣಗಳನ್ನು ಈ ಭಾಗದ ಹಲವು ಅಧ್ಯಾಯಗಳಲ್ಲಿ ವಿವರಿಸಲಾಗಿದೆ. ವಳ್ಳುವರು ಕುರಳಿನ ಮೊದಲ ಭಾಗದಲ್ಲಿ ವ್ಯಕ್ತಿಯ ಆಂತರಿಕ ಆಧ್ಯಾತ್ಮಿಕ ವಿಕಾಸವನ್ನು ಕುರಿತು ವಿವರಿಸಿದ ಅನಂತರ ಎರಡನೆಯ ಭಾಗವಾದ ಪೊರುಳ್‌ನಲ್ಲಿ ಅದೇ ವ್ಯಕ್ತಿಯ ಸಾರ್ವಜನಿಕ ಜೀವನ ಮತ್ತು ಸಮಾಜಗಳನ್ನು ಕುರಿತು ಚರ್ಚಿಸತೊಡಗು

ವುದನ್ನು ನಾವು ಮುಖ್ಯವಾಗಿ ಗಮನಿಸಬಹುದು. ನೈತಿಕ, ಸಾಂಸ್ಕೃತಿಕ ಮತ್ತು ಪಾರಮಾರ್ಥಿಕ ಪಕ್ವತೆಯಿಂದ, ತನ್ನ ವ್ಯಕ್ತಿ ವಿಕಾಸದ ಬೆಲೆಯುನ್ನು ಕಂಡರಿತವನು ಮಾತ್ರವೇ ವಿಶಾಲವಾದ ಸಾಮಾಜಿಕ ಜೀವನ ಕ್ಷೇತ್ರದಲ್ಲಿ ಪ್ರವೇಶಿಸಿ, ತನ್ನ ಫಲಪ್ರದ ಪಾತ್ರವನ್ನು ನಿರ್ವಹಿಸಲು ಅರ್ಹನಾಗುತ್ತಾನೆ, ಎಂಬುದು ತಿರುವಳ್ಳುವರ ಭಾವನೆಯಾಗಿತ್ತೆಂದು ಇದರಿಂದ ತಿಳಿಯುತ್ತದೆ. ಹೀಗೆ ಅವರ 'ಪೊರುಟ್ಪಾಲಿ'ನಲ್ಲಿ ಸರ್ವಧರ್ಮ ಸಮಭಾವ ಮತ್ತು ಸಾಮಾಜಿಕ ನೀತಿಗಳು ಒಂದಾಗಿ ಮೇಳವಿಸಿ, ಅದು ಅರಸನ ದೈವಿಕ ಅಧಿಕಾರದ ಸಿದ್ಧಾಂತ ಹಾಗೂ ವರ್ಣಾಶ್ರಮ ಧರ್ಮ ನೀತಿಗಳಿಂದ ಅತಿ ದೂರದಲ್ಲಿದೆ ಎಂಬುದು ಸ್ಪಷ್ಟವಾಗುತ್ತದೆ.

ಮೂರನೆಯ ಭಾಗವಾದ 'ಕಾಮತ್ತುಪ್ಪಾಲ್'ನ್ನು ಪರಿಶೀಲಿಸಿದರೂ ಅದು ಸಂಸ್ಕೃತದ ಕಾಮಶಾಸ್ತ್ರಗಳಿಗಿಂತ ವಿಷಯ ನಿರೂಪಣೆಯಲ್ಲಿ ಪೂರ್ತಿ ಭಿನ್ನವಾಗಿದೆ. ಅದನ್ನು 'ಕಳವಿಯಲ್' ಮತ್ತು 'ಕರ್ಪಿಯಲ್' ಎಂಬುದಾಗಿ ಎರಡು ಉಪಭಾಗಗಳನ್ನಾಗಿ ವಿಭಜಿಸಿದೆ. ಕಳವಿಯಲ್ ವಿವಾಹಪೂರ್ವ ಪ್ರೇಮದಲ್ಲಿ ಆರಂಭವಾಗಿ, ಯಾವೊಂದು ಧಾರ್ಮಿಕ ವಿಧಿ ನೀತಿಗಳಿಗೆ ಒಳಪಡದೆ ಕಾದಲರ ವಿವಾಹ ಸಂಬಂಧದಲ್ಲಿ ಅದು ಪರ್ಯವಸಾನವಾಗುತ್ತದೆ. ಇದು ತಮಿಳರಿಗೆ ಮಾತ್ರವೇ ವಿಶಿಷ್ಟವಾದ ಪರಿಕಲ್ಪನೆಯಾಗಿದೆ. 'ಕರ್ಪಿಯಲ್' ಪತಿ-ಪತ್ನಿಯರ ದಾಂಪತ್ಯ ಪ್ರೇಮವನ್ನು ಕುರಿತು ಹೇಳುತ್ತದೆ. ತಿರುವಳ್ಳುವರ 'ಕಾಮತ್ತುಪ್ಪಾಲ್' ಕಾಮಶಾಸ್ತ್ರಗಳಂತೆ ವಾಸ್ತವಿಕವಾದ ಕಾಮ ಮತ್ತು ಕಾಮಪ್ರಚೋದಕ ಆಸನಗಳ ಶಾಸ್ತ್ರೀಯ ವಿಶ್ಲೇಷಣೆಯಾಗಿರದೆ, ಹೆಣ್ಣು-ಗಂಡಿನ ಪ್ರಣಯ ಭಾವನೆಗಳನ್ನು ಅಪೂರ್ವ ಕಾವ್ಯ ಶೈಲಿಯಲ್ಲಿ ಅಭಿವ್ಯಕ್ತಿಸುವ ಕೃತಿಯಾಗಿದೆ. ಲೈಂಗಿಕ ಪ್ರೇಮದ ಬಹುಮುಖ ಭಾವನೆಗಳನ್ನು ಬೇರೆ ಬೇರೆ ನಾಟಕೀಯ ಹಾಗೂ ಗೀತಾತ್ಮಕ ಸನ್ನಿವೇಶಗಳಲ್ಲಿ ಕಲ್ಪಿಸಿ ಹೇಳಲಾಗಿದೆ. ಇಂದ್ರಿಯಾನುರಾಗದ ಉದ್ವೇಗವನ್ನು ಇಷ್ಟು ವೈವಿಧ್ಯಪೂರ್ಣವಾಗಿಯಾಗಲೀ ಇಷ್ಟು ಒಳಹೊಕ್ಕು ನೋಡಿಯಾಗಲೀ ವಿಶ್ವಸಾಹಿತ್ಯದಲ್ಲಿ ಹಿಂದೆಂದೂ ಪ್ರತಿಪಾದಿಸಿಲ್ಲ. ಸ್ವತಃ ಸುಖಮಯ ದಾಂಪತ್ಯ ಜೀವನದ ಸವಿಯನ್ನು ಕಂಡಿದ್ದ ವಳ್ಳುವರು ಪ್ರಣಯಿಗಳ ನವುರು ಭಾವನೆಗಳ ಚಿತ್ರಗಳನ್ನು ಸೃಷ್ಟಿಸಿ ಅದರಿಂದ ಸುಪ್ರಸನ್ನವಾದ ತೃಪ್ತಿಯನ್ನು ಪಡೆದಿದ್ದಾರೆ. ಅವರು ಹೇಳುತ್ತಾರೆ:

> ಕಳ್ಳು ತನ್ನ ರುಚಿಕಂಡವರಿಗಲ್ಲದೆ, ಕಾಮದಂತೆ
> ನೋಟಮಾತ್ರದಿಂ ಮಾದಕತೆಯ ತರುವುದುಂಟೆ? (1090)

ಅವರ ಕಾದಲನು ತನ್ನ ಪ್ರಿಯತಮೆಯ ಪ್ರೇಮಾಗ್ನಿಯಲ್ಲಿ ತನ್ನನ್ನೇ ಅರ್ಪಿಸಿಕೊಳ್ಳಲು ಇಚ್ಛಿಸುತ್ತಾನೆ. ಈ ಬೆಂಕಿಯ ಜ್ವಾಲೆಯಾದರೂ ಎಂತಹದು? ತಿರುವಳ್ಳುವರ ಕಾದಲನು ಈ ಬೆಂಕಿಯ ತಾಪದಿಂದ ದಿಗ್‌ಭ್ರಮೆಗೊಂಡು ಗೊಂದಲಕ್ಕೀಡಾಗುತ್ತಾನೆ:

ಅಗಲಿದರೆ ಸುಡುವುದು, ಬಳಿಸಾರೆ
ತಂಪೆರೆವುದು
ಈ ಬಗೆಯ ಕಿಚ್ಚನು ಎಲ್ಲಿಂದ ಪಡೆದಳೋ
ಈ ಎಳೆವೆಣ್ಣು? (1104)

ಈ ಉದಾಹರಣೆಗಳಿಂದ, ಸಂಸ್ಕೃತದ ಕಾಮಶಾಸ್ತ್ರಕ್ಕೂ ತಿರುಕ್ಕುರಳಿನ "ಕಾಮತ್ತುಪ್ಪಾಲಿ"ಗೂ ಯಾವ ಸಮಾನಾಂಶ ಇಲ್ಲ ಎಂಬುದು ವೇದ್ಯವಾಗುತ್ತದೆ. ಇದರಿಂದ ತಿರುವಳ್ಳುವರ ಅರಮ್, ಪೊರುಳ್, ಇನ್ಬಮ್-ಗಳ ಪರಿಕಲ್ಪನೆಯು ಸಂಸ್ಕೃತದ ಧರ್ಮ, ಅರ್ಥ, ಕಾಮ, ಮೋಕ್ಷವೆಂಬ ಪುರುಷಾರ್ಥ ವರ್ಗೀಕರಣದ ಆಧಾರದ ಮೇಲೆ ಸೃಷ್ಟಿಯಾಗಿದೆಯೆಂದಾಗಲೀ ಅವುಗಳಿಗೆ ಸಂಬಂಧವಿದೆಯೆಂದಾಗಲೀ ಭಾವಿಸುವುದು ತಪ್ಪಾಗುತ್ತದೆ. ಹಾಗೆಯೇ ತಿರುವಳ್ಳುವರು ವಿವರಿಸಲಾಗದ ಕಾರಣಕ್ಕಾಗಿ ಮೋಕ್ಷವನ್ನು ಪ್ರತ್ಯೇಕ ಭಾಗದಲ್ಲಿ ವಿವರಿಸಿ ಹೇಳುವುದನ್ನು ಕೈ ಬಿಟ್ಟಿದ್ದಾರೆಂದು ಗ್ರಹಿಸುವುದೂ ತಪ್ಪಾಗುತ್ತದೆ. ಅನಿಶ್ಚಿತವಾದ ಭವಿಷ್ಯದ ಬಗ್ಗೆ ಪಾರಮಾರ್ಥಿಕವಾಗಿ ಪರ್ಯಾಲೋಚಿಸುವುದಕ್ಕಿಂತಲೂ ಅನಂತ ವರ್ತಮಾನದಲ್ಲಿ ಬದುಕನ್ನು ಸಮಗ್ರವಾಗಿ, ಶ್ರೀಮಂತವಾಗಿ ಅನುಭವಿಸುವುದರಲ್ಲಿ ತಿರುವಳ್ಳುವರಿಗೆ ಹೆಚ್ಚು ಕಳಕಳಿ ಇದ್ದಿತೆಂದು ಸ್ಪಷ್ಟವಾಗಿದೆ. ಆದರಿಂದ ಮಾನವನ ಆತ್ಮ ವಿಷಯವಾದ ಅಗತ್ಯಗಳನ್ನು ಪೂರೈಸುವುದರಲ್ಲಿ ಅವರು ವಿಫಲರಾಗಿದ್ದಾರೆಂದು ಗ್ರಹಿಸುವುದು ಸರಿಯಲ್ಲ. ಅರತ್ತುಪ್ಪಾಲಿನಲ್ಲಿ ಬರುವ ಧರ್ಮದ ಮೇಲ್ಮೆ, ಮಾಂಸತ್ಯಾಜ್ಯ ಕೊಲ್ಲದಿರುವ ಗುಣ, ತಪಸ್ಸು, ನಿಜವನ್ನು ತಿಳಿಯುವುದು, ತ್ಯಾಗ, ಆಶೆಯ ನಿರ್ಮೂಲನ, ಮತ್ತು ಅಂತ್ಯಸತ್ಯದರ್ಶನ-ಇವೇ ಮೊದಲಾದ ಅಧ್ಯಾಯಗಳು ವ್ಯಕ್ತಿಯ ಲೌಕಿಕ ಜೀವನಕ್ಕೆ ಸ್ಪಷ್ಟವಾದ ಆಧ್ಯಾತ್ಮಿಕ ಸಂಕಲ್ಪಶಕ್ತಿಯನ್ನೆರೆಯುತ್ತವೆ. ಅಲ್ಲದೆ, ಸ್ವರ್ಗವನ್ನು ಭೂಮಿಗಿಳಿಸುವ ಮತ್ತು ಮಮಕಾರ ರಹಿತವಾದ ಆನಂದವನ್ನು ದೂರದ ಕನಸಾಗುವುದಕ್ಕೆ ಪ್ರತಿಯಾಗಿ ವರ್ತಮಾನದ ಸತ್ಯವನ್ನಾಗಿಸುವ ಪರಿಣಾಮವೂ ಇವುಗಳಲ್ಲಿ ಕಾಣಬಹುದಾಗಿದೆ. ಕುರಳೊಂದರಲ್ಲಿ ವಳ್ಳುವರ್ ಹೇಳುವ ಮಾತಿದು :

ಇಹಲೋಕದಲ್ಲಿ ಸಲ್ಲುವ ತೆರದಿ ಬಾಳ್ವವನು
ಮೇಲು ಲೋಕದಲಿ ನೆಲಸಿದ ದೇವತೆಗಳ ನಡುವೆ
ಶೋಭಿಸುವನು (50)

ತಿರುವಳ್ಳುವರು ಪಾರಮಾರ್ಥಿಕ ಆನಂದವೆನ್ನುವುದು ಇಹಲೋಕದ ಬದುಕಿನಲ್ಲಿದ್ದುಕೊಂಡು ಇಂದೇ ಸಾಧಿಸಬಹುದಾದ ಒಂದು ಮಾನಸಿಕ ಸ್ಥಿತಿಯೆಂದೂ

ಅದು ಲೋಕೋತ್ತರಕ್ಕೆ ಸೇರಿದುದಲ್ಲವೆಂದೂ ಪರಿಭಾವಿಸಿದ್ದರು ಆದ್ದರಿಂದ ಅವರು ವಾಚಕನ ಕೈಹಿಡಿದುಕೊಂಡು ಮೆಲ್ಲ ಮೆಲ್ಲಗೆ ಅವನ ಆಂತರಿಕ ಮತ್ತು ಬಹಿರಂಗ ಬೆಳವಣಿಗೆಗಳ ವಿವಿಧ ಹಂತಗಳ ಮೂಲಕ ಕರೆದೊಯ್ದು, ಅರತ್ತು ಪ್ಪಾಲಿನ 35, 36 ಮತ್ತು 51 ನೆಯ ಅಧ್ಯಾಯಗಳಲ್ಲಿ, ಮನುಷ್ಯರನ್ನು ಸುಖ ದುಃಖಗಳು, ಜನನ ಮರಣಗಳಿಂದ ವಿಮುಕ್ತಗೊಳಿಸುವ ಪರಂಜ್ಯೋತಿಯ ಬಗ್ಗೆ ನೇರವಾಗಿ ಪ್ರಸ್ತಾವಿಸುವರು.

ಯಾವುದರಿಂ ಯಾವುದರಿಂ ನೀಗಿಕೊಂಡವನ ನೋವು
ಅದರದರಿಂ ಇಲ್ಲವೆನಿಪುದು (31)

ನಾನು ನನ್ನದೆಂಬಹಮಿಕೆಯ ಕಡಿದುಕೊಂಡವನು
ಬಾನವರಿಗು ಎಟುಕದ ಕೈವಲ್ಯ ಸೇರುವನು (346)

350 ನೆಯ ಕುರಳಿನಲ್ಲಿ ವಳ್ಳುವರು ಪ್ರಾಪಂಚಿಕ ವಿಷಯಗಳ ಮೇಲಿನ ಮೋಹವನ್ನು ಜಯಿಸಲು ದೇವರ ಮೇಲೆ ಮೋಹವನ್ನು ಬೆಳೆಸಬೇಕೆಂದು ಸಲಹೆ ಮಾಡುತ್ತಾರೆ.

ಅಂಟಿಕೊಳ್ಳಲು ಬೇಕು ಅಂಟದವನ ಸಂಬಂಧ
ಈ ಲೋಕದ ನಂಟನು ಬಿಟ್ಟು ಬಿಡುವುದಕೆ (350)

ಮುಂದುವರಿದು ಹೇಳುತ್ತಾರೆ :

ಸಂದೇಹ ನೀಗಿ ತಿಳಿಯಾದ ನಿರ್ಮಲ ಚಿತ್ತರಿಗೆ
ಭೂಮಿಗಿಂ ಸ್ವರ್ಗವೇ ಸನಿಹದಲಿಹುದು (353)

ನಿಜವನ್ನು ತಿಳಿಯುವುದು ಎಂಬ ಅಧ್ಯಾಯದಲ್ಲಿ ಅವರು ಹೇಳುವ ಮಾತು ಹೀಗಿದೆ :

ಮರುಳು ನೀಗಿ ಕರೆಯಿಲ್ಲದ ಕಾಣ್ಕೆಯುಳ್ಳವರಿಗೆ
ಇರುಳು ನೀಗಿ ಸುಖ ನೆಲೆಯೂರುವುದು (352)

ಆಶೆ, ಮೋಹಗಳಿಗೆ ಅಂಟಿಕೊಂಡು, ನಾವು ಮುಕ್ತರು ಎಂಬ ಮರುಳಿಗೊಳಗಾದವರಿಗೆ ಅದು ನಿಜವಾದ ಮುಕ್ತಿಯಲ್ಲವೆಂದು 365 ನೆಯ ಕುರಳಿನಲ್ಲಿ ಸಾರಿ ಹೇಳುತ್ತಾರೆ.

ಆಶೆಯನು ಹರಿದುಕೊಳ್ಳರೆ ಮುಕ್ತರು
ಉಳಿದವರು ನಿಜದಿ ಮುಕ್ತಿ ಪಡೆದವರಲ್ಲ (365)

ಈ ಯೋಗಿ 369 ನೆಯ ಕುರಳಿನಲ್ಲಿ ಈ ರೀತಿ ಭರವಸೆ ಕೊಡುತ್ತಾರೆ :

ಆಶೆಯೆನ್ನುವ ದುಃಖಗಳತಿ ಮಿಗಿಲೆನಿಪ ದುಃಖವು
ತಾ ಕರಗಿದಡೆ, ಇಹದಲ್ಲಿಯೆ ಸುಖವು
ಸತತ ನೆಲಸುವುದು (369)

ಆರದಿರುವಾಶೆಯನು ಹರಿದುಕೊಂಬವಗೆ
ಅಮೃತತ್ವವು ಅಲ್ಲೆ ಲಭಿಸುವುದು (370)

ಎಂದು ಹೇಳಿ "ಆಶೆಯನ್ನು ಹರಿಯುವುದು" ಎಂಬ ಅಧ್ಯಾಯವನ್ನು ಮುಕ್ತಾಯಗೊಳಿಸುತ್ತಾರೆ.

ಇದರಿಂದ, ತಿರುವಳ್ಳುವರು ಮೋಕ್ಷವನ್ನು ಕುರಿತು ಪ್ರತ್ಯೇಕ ಅಧ್ಯಾಯವನ್ನು ಬರೆಯಲಿಲ್ಲವೆಂದು ವ್ಯಕ್ತವಾಗುತ್ತದೆ. ಏಕೆಂದರೆ ಅವರ ದೃಷ್ಟಿಯಲ್ಲಿ ಸ್ವರ್ಗ ಮತ್ತು ಭೂಮಿಗಳು ಪ್ರತ್ಯೇಕವಾದ ವಿಭಾಗಗಳಾಗಿರಲಿಲ್ಲ. ಐಹಿಕ ಸದಾಚಾರದಿಂದ ಕೂಡಲೇ ಸ್ವರ್ಗೀಯ ಆನಂದ ಲಭ್ಯವೆನ್ನಿಸಿತು. ಕಾರಣವೇನೆಂದರೆ ಭೂಮಿಯು ಸ್ವರ್ಗದೊಂದಿಗೆ ನಿಕಟವಾದ ಸೋದರಿಕೆಯನ್ನು ಪಡೆದಿತ್ತು.

ಇನ್ನು ತಿರುಕ್ಕುರಳ್ ಎಂಬ ಪದದ ಅರ್ಥವನ್ನು ಪರಿಶೀಲಿಸುವುದಾದರೆ, "ತಿರು" ಎಂದರೆ ಪವಿತ್ರವೆಂದೂ "ಕುರಳ್" ಎಂದರೆ ಕಿರಿದು ಎಂದೂ ಅರ್ಥವಾಗುತ್ತದೆ. ಪ್ರತಿ ಕುರುಳೂ ಎರಡು ಸಾಲುಗಳಲ್ಲಿದ್ದು ಮೊದಲ ಸಾಲಿನಲ್ಲಿ ನಾಲ್ಕು ಗಣಗಳೂ ಎರಡನೆಯ ಸಾಲಿನಲ್ಲಿ ಮೂರು ಗಣಗಳೂ ಇವೆ. ಈ ಬಗೆಯ ದ್ವಿಪದವನ್ನು ತಮಿಳಿನಲ್ಲಿ "ಕುರಳ್‌ವೆಣ್ಬಾ" ಎಂದು ಕರೆಯುತ್ತಾರೆ.

ವೆಣ್ಬಾ ಛಂದ; ಪ್ರಕಾರದಲ್ಲಿ ನಾಲ್ಕು ಸಾಲುಗಳಿರುತ್ತವೆ. ಈ ಬಂಧದಲ್ಲಿ ಕಾವ್ಯರಚನೆ ಮಾಡುವುದು ಕಷ್ಟಸಾಧ್ಯವೆಂದು ಎಲ್ಲರೂ ಒಪ್ಪುತ್ತಾರೆ. ಕುರಳ್ "ವೆಣ್ಬಾ" ಬಂಧದ ಅರ್ಧಭಾಗವಾದುದರಿಂದ ಇದರ ಪ್ರಯೋಗದಲ್ಲಿ ಕವಿಗೆ ಇನ್ನೂ ಹೆಚ್ಚು ಸಂಯಮವಿರಬೇಕಾಗುತ್ತದೆ.

"ಮುಕ್ತಛಂದಸ್ಸು" ಎಂಬುದು ಕುರಳಿಗೆ ವ್ಯತಿರಿಕ್ತವಾದುದು. ಅದನ್ನು ಬಲೆಯನ್ನು ಕಟ್ಟದ ಟೆನ್ನಿಸ್ ಆಟವನ್ನು ಆಡುವುದಕ್ಕೆ ಹೋಲಿಸಲಾಗಿದೆ. ನಿಯಮ ಬದ್ಧವಾದ ಛಂದಃ ಪ್ರಭಾವವನ್ನು ಉಲ್ಲಂಘಿಸಿರುವ ಮುಕ್ತಛಂದಃ ಪ್ರಕಾರದ ಕವಿಗಳು ಪದಾಭಿವ್ಯಕ್ತಿಯ ಶಕ್ತಿ ಮತ್ತು ಸಾಮರ್ಥ್ಯಗಳನ್ನು ಕಂಡಂತೆಯೇ ಕಳೆದು ಕೊಂಡಿರುತ್ತಾರೆ. ಅದಕ್ಕೆ ಪ್ರತಿಯಾಗಿ ವಳ್ಳುವರ್ ಆದರೋ ವಿಶೇಷತಃ ವಿಕಾಸ ಗೊಂಡ ಕುರಳ್ ಛಂದಸ್ಸಿನ ಕಟ್ಟುಪಾಡುಗಳನ್ನು ಇಚ್ಛಾಪೂರ್ವಕವಾಗಿ ತಾವಾಗಿಯೇ ಅಂಗೀಕರಿಸಿರುತ್ತಾರೆ. ಅದರಲ್ಲಿ ಪ್ರಭುತ್ವವನ್ನು ಪಡೆದು ವಸ್ತು ಮತ್ತು ಸ್ವರೂಪ

ಗಳ ನಡುವೆ ಅತ್ಯುನ್ನತವಾದ ಸೌಹಾರ್ದ ಶಕ್ತಿಯನ್ನು ಸಾಧಿಸಿದರು. ಒಂದು ವಿಧವಾದ ಗಾಢವಾದ ಶಬ್ದಯೋಗದಲ್ಲಿ ತೊಡಗಿ, ಪದಗಳು ಅತ್ಯಧಿಕ-ಅರ್ಥಪೂರ್ಣವಾಗಿರುವಂತೆ ಮಾಡಿದರು.

ಕುರಳ್ ಅಲೆಕ್ಸಾಂಡರ್ ಪೋಪನ "ಝಣ ಝಣತ್ಕಾರದ ದ್ವಿಪದಿ"ಗಳಲ್ಲ. ಏಕೆಂದರೆ ಅದರಲ್ಲಿ ಆಡಂಬರದ ತಮಟೆಯ ಸದ್ದು ಕೇಳಿಸುವುದಿಲ್ಲ. ಇಲ್ಲಿ, ಕಾವ್ಯವು ಹರ್ಷೋದ್ಗಾರದ ಪ್ರಾಸ ಸಂಯೋಜನೆಯ ಹೊಣೆಯಾಗಿರದೆ. ಮಹಾಬಲಿಪುರದ ದೇವಾಲಯಗಳ ಶಿಲೆಯ ಮೇಲೆ ಶ್ರಮಪೂರ್ವಕವಾಗಿ ಕೆತ್ತಿರುವ ಚಿತ್ರಗಳಂತೆ ಉತ್ಕರ್ಷವೂ ಸಂಕ್ಷಿಪ್ತವೂ ಆದ ಕಲಾಕ್ರಿಯೆಯಾಗಿದೆ. ಧೀಮಂತ ಚಿಂತನೆ ಮತ್ತು ಜೀವಂತ ಶೈಲಿಗಳಿಂದ ಮಿನುಗುವ ಕುರಳಿನ ಲಯವಾದರೋ ಸಂಯಮಯುತವೂ ಗಂಭೀರವೂ ಆದುದು. ಕುರಳು ಯಾಂತ್ರಿಕವಾಗಿ ಹೋಳು ಮಾಡಿದ ಜಡವಸ್ತುವಲ್ಲ. ಅದು ಎರಡು ಸಾವಿರ ವರ್ಷಗಳಿಂದಲೂ ಜೀವಂತವಾಗಿ ಸ್ಪಂದಿಸುತ್ತಿರುವ ಪರಿಪೂರ್ಣವಾಗಿ ಸಂಯೋಜಿಸಿರುವ ಒಂದು ಸಜೀವಿ.

ಅನಂತವಾದ ಶ್ರೀಮಂತಭಾವನೆಗಳನ್ನು ಕಲೆಹಾಕಿ, ಸಣ್ಣಕಾಳಿನ ಗಾತ್ರದಲ್ಲಿ ತುಂಬಿಡುವ ವಳ್ಳುವರನ್ನು ಪ್ರಾರಿಸುವುದು, ಕಂಬರಿಗೂ ಸಾಧ್ಯವಾಗಲಿಲ್ಲವೆಂದರೆ ಆಶ್ಚರ್ಯ ಪಡಬೇಕಾಗಿಲ್ಲ. ಕುರಳಿನ 1330 ದ್ವಿಪದಿಗಳಿಗೆ ಸದೃಶವಾದ ವ್ಯಾಪ್ತಿಗೆ ಒಳಪಟ್ಟು, ಈ ಲೇಖಕನಿಗೆ ತಿಳಿದಿರುವ ಭಾಷೆಯ ಯಾವುದೇ ಸಾಹಿತ್ಯದಲ್ಲಿರುವುದಕ್ಕಿಂತಲೂ ಹೆಚ್ಚಾಗಿ ಇಲ್ಲಿ ಅನೇಕ ಸ್ಮರಣೀಯ ಶಕ್ತಿಗಳಿವೆ, ಪಂಕ್ತಿಗಳಿವೆ. ಜಿ. ಯು. ಪೋಪ್ ಅವರು ಕುರಳಿನ ತಮ್ಮ ಅನುವಾದಗಳ ಪ್ರಸ್ತಾವನೆಯಲ್ಲಿ ಹೇಳಿರುವ ಈ ಮಾತುಗಳು ಉಚಿತವೆನಿಸುತ್ತವೆ. "ತಮಿಳಿನ ಉದ್ದಾಮ ಕಾವ್ಯವು ವಿದ್ಯಾರ್ಥಿಯ ಪ್ರಯತ್ನಗಳಿಗೆ ಸವಾಲಾಗಿರುವಂತೆ ಬೇರೆ ಯಾವುದೂ, ಹದಗೆಟ್ಟ ಗ್ರೀಕಿನ ಮೇಳಗೀತವೂ ಸಹ ಇಲ್ಲ. ತಮಿಳಿನ ಕಾವ್ಯ ಶೈಲಿಯಲ್ಲಿ ಎಲ್ಲ ರೀತಿಯ ಅಧ್ಯಾಹಾರಗಳಿಗೂ ಅವಕಾಶವಿದೆ. ಆದ್ದರಿಂದ ಒಂದು ಪಂಕ್ತಿಯು ಕೃತಕವಾಗಿ ಪೋಣಿಸಿದ ಒರಟೊರಟಾದ ಶಬ್ದಗಳ ಮಾಲೆಗಿಂತಲೂ ಚಿಕ್ಕದಾಗಿರುತ್ತವೆ. ಉತ್ತಮೋತ್ತಮ ರಚನೆಗಳು ಚೌಪದಿಗಳೋ ದ್ವಿಪದಿಗಳೋ ಆಗಿದ್ದು ಪ್ರತಿಯೊಂದೂ ನೀತಿಸೂಕ್ತಿಯಂತೆ ಒಂದು ಸಮಗ್ರ ಭಾವನೆಯನ್ನು ಒಳಗೊಂಡಿರುತ್ತವೆ. ಅವುಗಳ ಬಂಧ 'ಮೊಸಾಯಿಕ್' ವಿನ್ಯಾಸವನ್ನು ಹೋಲುತ್ತದೆ. ಅವುಗಳ ಸಾಮಗ್ರಿಗಳು ಕೆಲವು ವೇಳೆ ಪರಸ್ಪರವಾಗಿ ಜೋಡಿಸಿದ ಬಣ್ಣದ ಗಾಜಿನ ಚೂರುಗಳಾಗಿರಬಹುದು, ಆದರೆ ಕೆಲವು ವೇಳೆ ಬಹಳ ಬೆಲೆಬಾಳುವ ಹರಳುಗಳೋ ಅಪ್ಪಟ ಬಂಗಾರವೋ ಆಗಿರಬಹುದು. ವಿನ್ಯಾಸವೆಂತಹುದು ? ಏಕೆ, ನೀವು ಅದರ ಸುತ್ತಲೂ ಓಡಾಡಿ ಎಲ್ಲ ದೃಷ್ಟಿಕೋನಗಳಿಂದಲೂ ನೋಡತೊಡಗುವಿರಿ. ಮೊದಲು ತುಸು ಅನುಭವಿಸಿ

ಅನಂತರ ಬಹುದೀರ್ಘಕಾಲದವರೆಗೆ ಏನೇನೂ ಅರ್ಥವಾಗದಿರುತ್ತಿದ್ದು ಸ್ವಲ್ಪ ಸೂಚನೆ ಮಾತ್ರ ಗೋಚರಿಸಬಹುದು. ಒಡನೆಯೇ ಅದು ಪುನಃ ಪರ್ಯಾಲೋಚಿಸ ತಕ್ಕುದೆಂದೂ ಯಾವುದೋ ಸಂಕೇತಾಂಶವುಳ್ಳದೆಂದೂ ಮನವರಿಕೆಯಾಗುವುದು. ಅವಿರಳವಾಗಿ ವಿಕಟಾಕೃತಿಯುಳ್ಳದೋ ಒಮ್ಮೊಮ್ಮೆ ವಿಚಿತ್ರಾಕರ್ಷಣೆಯುಳ್ಳದೋ ಕೆಲವು ವೇಳೆ ಅಪೂರ್ವ ಸೌಂದರ್ಯವುಳ್ಳದೋ ಆಗಿರಬಹುದು.



## 9. ತಿರುವಳ್ಳುವರ್ ಕೃತಿಯ ಕೆಲವು ಮಿಂಚುನೋಟಗಳು

**ನಗೆ ಮತ್ತು ಕಣ್ಣೀರು**

ತಿರುವಳ್ಳುವರು ನಮ್ಮನ್ನು ನಗೆ ಮತ್ತು ಕಣ್ಣೀರಿನ ಚಿಕಿತ್ಸೆಗೆ ಒಳಪಡಿಸುತ್ತಾರೆ.

ತಿಳಿವಳಿಕೆಯುಳ್ಳ ಪ್ರಶಾಂತ ನಗೆಯೊಂದು ಎಲ್ಲ ಜ್ಞಾನದ ಆದಿ ಅಂತ್ಯಗಳೆಂದು ಅವರು ತಿಳಿದಿದ್ದರು.

ನಗಬಲ್ಲ ಗುಣವಿಲ್ಲದವಗೆ
ವಿಶಾಲವೀ ಲೋಕದಲಿ
ಹಗಲಿನಲಿ ಇರುಳೆ ಕವಿಯುವುದು (999)

ಎಂದವರು ಸಾರಿದ್ದಾರೆ. ವಳ್ಳುವರ ಬಹುಪಾಲು ಸೂಕ್ತಿಗಳಲ್ಲಿ ನಗೆಯ ಗುಪ್ತವಾಹಿನಿ ಹರಿಯುತ್ತಿರುತ್ತದೆ. ಅಸೂಯಾಪರನಿಗೆ ಹೊಟ್ಟೆಯಕಿಚ್ಚೇ ಸಾಕಷ್ಟು ಶಕ್ತಿಯೆಂದು ಎತ್ತಿತೋರಿಸಿ, ಕರುಬುವ ವ್ಯಕ್ತಿಗೆ ಏಳಿಗೆಯಿಲ್ಲ. ಅಸೂಯಾ ರಹಿತನಾದವನು ಎಂದಿಗೂ ಏಳಿಗೆಯಿಂದ ವಂಚಿತನಾಗುವುದಿಲ್ಲ ಎಂದು ಒತ್ತಿ ಹೇಳಿರುತ್ತಾರೆ.

ಈ ನಿಯಮಕ್ಕೆ ಹೊರತಾದ ಅಪೂರ್ವ ಅಪವಾದಗಳನ್ನು ಅವರು ಪರೀಕ್ಷಿಸ ಹೊರಟು ತಮ್ಮೊಳಗೆ ತಾವೇ ನಕ್ಕು ಹೇಳುತ್ತಾರೆ:

ಅಸೂಯೆಯುಳ್ಳವನ ಸಿರಿ
ಸುಮನಸ್ಕನ ಕೇಡು
ಈ ವೈಪರೀತ್ಯಗಳ ಕಾರಣವನು
ಅರಸಿ ತಿಳಿಯಬೇಕು (169)

ಅಶಿಕ್ಷಿತ ಮನುಷ್ಯನು ತನ್ನ ಬುದ್ಧಿವಂತಿಕೆಯ ಅಸಹ್ಯ ಪ್ರದರ್ಶನ ಮಾಡುವುದನ್ನು ಕಂಡು, ದೈವದತ್ತವೂ ಅಗಾಧವೂ ಆದ ಪರಿಜ್ಞಾನವುಳ್ಳ ವಳ್ಳುವರು ಕಣ್ಣಲ್ಲಿ ನಗೆ ಮಿಂಚಿಸಿ ಹೀಗೆ ಹೇಳುತ್ತಾರೆ:

ಕಲಿಯದವನು ಕಲಿತವರ ಸಭೆಯಲಿ
ಮಾತಿನ ಮೋಹಕೆಳಸುವುದು
ಮೊಲೆಗಳೆರಡಿಲ್ಲದ ಕಾಮಿನಿಯು
ಕಾಮಾತುರವ ತೋರಿಸಿಕೊಂಡಂತೆ (402)

ವಳ್ಳುವರ ದೃಷ್ಟಿಯಲ್ಲಿ ಯಾರು ಸರಿಯಾದ ರೀತಿಯಲ್ಲಿ ಶಿಕ್ಷಣವನ್ನು ಪಡೆದಿರುವರೋ ಅವರು ಗುಣವಂತರು. ಸರಿಯಾದ ರೀತಿಯಲ್ಲಿ ಶಿಕ್ಷಣವನ್ನು ಪಡೆಯದ ಅಶಿಕ್ಷಿತರೆಲ್ಲ ಕೆಟ್ಟವರು. ಆದರೂ ಅವರು ಈ ನಿಯಮಕ್ಕೆ ಒಂದು ವಿಸ್ಮಯಕರವಾದ ಅಪವಾದವನ್ನು ಕಲ್ಪಿಸಿ ಹೀಗೆ ಹೇಳಿರುತ್ತಾರೆ:

ಕಲಿಯದವರು ಬಲು ಒಳ್ಳೆಯವರೆ
ಕಲಿತವರ ಮುಂದೆ ಸೊಲ್ಲೆತ್ತದೆ
ಸುಮ್ಮನಿರೆ (403)

ವಳ್ಳುವರು 'ಅರಿವುಗೇಡಿತನ'ವೆಂಬ ಅಧ್ಯಾಯದಲ್ಲಿ ಅವಿವೇಕಿಗಳ ಬಗ್ಗೆ ತಮ್ಮ ತೀಕ್ಷ್ಣ ತಿರಸ್ಕಾರವನ್ನು ವ್ಯಕ್ತಪಡಿಸುತ್ತಾರೆ:

ಅರಿವುಗೇಡಿಯು ತನಗೆ ತಾನೆ
ತಂದೊಡ್ಡುವ ದುಃಖವನು
ಅವನ ಹಗೆಗಳಿಗು ತಂದೊಡ್ಡುವುದರಿದು (843)

ಶ್ರೀಮಂತರಾದ ಅವಿವೇಕಿಗಳನ್ನು ವಳ್ಳುವರು ವಿಶಿಷ್ಟ ಬಗೆಯ ತಿರಸ್ಕಾರದಿಂದ ನೋಡುತ್ತಾರೆ:

ಅರಿವಿಲ್ಲದವನೊಬ್ಬ ಮನತುಂಬಿ ಒಂದನಿತ್ತರೆ
ಬೇರೆ ಮತ್ತೇನು! ಅದು ಪಡೆದವನ
ತಪದ ಫಲವು (842)

ವಳ್ಳುವರು ಮುಂದುವರಿದು ಮೂರ್ಖರನ್ನು ಕುರಿತು ಹೇಳುವ ಮಾತಿದು:

ಬೆಳ್ಳಕ್ಕರಿಗತನ ಯಾವುದೆನೆ
ಅರಿತವನು ತಾನೆಂದು
ಕೊಚ್ಚಿಕೊಳ್ಳುವ ಸೊಕ್ಕು (844)

ಮಹಾಪುರುಷರ ಮತ್ತು ವಿವೇಕಿಗಳ ಸ್ನೇಹವನ್ನು ಮೆಚ್ಚಿಕೊಳ್ಳುವ ವಳ್ಳುವರು ಮೂರ್ಖರ ಸಹವಾಸದಿಂದ ತುಂಬ ಪಾಡುಪಟ್ಟಂತೆ ಕಾಣುತ್ತದೆ. ಅವರು ಹೇಳುತ್ತಾರೆ:

ಜ್ಞಾನಿಗಳ ಸಭೆಯೊಳಗೆ ಅಜ್ಞನ ಪ್ರವೇಶವು
ಸ್ವಚ್ಛನೆಯ ಹಾಸಿನ ಮೇಲೆ ಮಲಿನವಹ
ಪಾದಗಳನು ಇಟ್ಟಂತೆ (840)

ನಿಯಮಾನುಸಾರ, ವಳ್ಳುವರ ಬಹುಪಾಲು ಹಾಸ್ಯವು ಕರುಣೆಯ ಲೇಪನದಿಂದ ಕೂಡಿದುದು; ಅನೇಕ ವೇಳೆ ಅವರು ಕಣ್ಣೀರಿನ ಮೂಲಕವೇ ನಗುವನ್ನು ವ್ಯಕ್ತಪಡಿಸುತ್ತಾರೆ. ದುಷ್ಟರನ್ನು ಉದ್ದೇಶಿಸಿ ಹೇಳುವಾಗ ವಳ್ಳುವರು ವ್ಯಂಗ್ಯ ಅಪಹಾಸ್ಯಗಳನ್ನು ಅವರ ಮೇಲೆ ಬೀರುತ್ತಾರೆ. ಅವರು ಉಪ–ಮಾನವ (ಕೀಳು) ವರ್ಗಕ್ಕೆ ಸೇರಿದ್ದರೂ ಮನುಷ್ಯರಂತೆಯೇ ಎಂಥ ಕೇಡಿಗರು! ವಳ್ಳುವರ ಕೌತುಕವೂ ಅಗಾಧವಾದ ಆಶ್ಚರ್ಯವೂ 1071ನೆಯ ಕುರಳಿನಲ್ಲಿ ಪ್ರತಿಬಿಂಬಿತವಾಗಿದೆ:

ಕೀಳು ಗೆಯ್ಮೆಯುವರು ಮನುಜರನೆ ಹೋಲುವರು!
ಈ ತೆರೆದ ಅಣಕವನು ಬೇರಾವ ಇಬ್ಬಗೆಯ
ವಸ್ತುಗಳಲಿ ನಾವು ಕಂಡುದಿಲ್ಲ (1071)

ಷೋಪೆನ್ ಹೇವರ್ ತಮ್ಮೊಂದು ಪ್ರಬಂಧದಲ್ಲಿ ಈ ಕುರಳಿನ ಬಗ್ಗೆ ಪ್ರಸ್ತಾಪಿಸುತ್ತ ಇಂಥ ಮನೋಜ್ಞವಾದ ಹಾಸ್ಯ ಬೇರೆಲ್ಲೂ ಕಾಣಸಿಗುವುದು ಅಪರೂಪವೆಂದಿದ್ದಾರೆ.

**ಉಲ್ಲಾಸದ ಗಾರುಡಿಗ**

ಕೆಲವೊಮ್ಮೆ ವಳ್ಳುವರು ತಾವು ಹೇಳುವ ವಿಷಯದಲ್ಲಿ ಉಲ್ಲಾಸದ ಗಾರುಡಿಗನಂತೆ ನಡೆದುಕೊಳ್ಳುತ್ತಾರೆ. ತಾವು ಹೇಳಲಿಚ್ಛಿಸುವ ವಿಷಯವನ್ನು ಗಾಳಿಯಲ್ಲಿ ಹಾರಿಸಿ, ಅಂತರಿಕ್ಷಕ್ಕೇರಿಸಿ ತಲೆಕೆಳಗಾಗಿ ಮಾಡಿ ಭೂಮಿಗೆಳೆದು ತರುತ್ತಾರೆ. ಧರ್ಮಕ್ಕೂ ಆರ್ಥಿಕವಾದ ತಳಹದಿಯಿದೆಯೆಂಬ ಮಾರ್ಕ್ಸಿಸ್ಟ್ ತತ್ವದ ನಿಲುವನ್ನು ಅವರು ತಳೆದಿದ್ದರು. ವಾಸ್ತವಿಕವಾಗಿ 757ನೆಯ ಕುರಳಿನಲ್ಲಿ ಹೀಗೆ ಹೇಳಿರುತ್ತಾರೆ:

ಕರುಣೆಯೆನ್ನುವ ಪ್ರೀತಿಯ ಕೂಸು ಬೆಳೆಯೆ
ಸಿರಿಯೆನ್ನುವ ಅಕ್ಕರೆದಾದಿಯ ಆರೈಕೆ ಇರಬೇಕು (757)

ಐಶ್ವರ್ಯಕ್ಕೆ ಶಾಶ್ವತವಾದ ಮೌಲ್ಯವಿಲ್ಲವೆಂದು ಅವರು ಭಾವಿಸಿದ್ದಾಗ್ಯೂ ಮಹತ್ಕಾರ್ಯಗಳ ಸಾಧನೆಗೆ ಅದು ಅನಿವಾರ್ಯ ಮಾಧ್ಯಮವೆಂದು ಅವರ ಅಭಿಪ್ರಾಯವಾಗಿತ್ತು. ತತ್ಪರಿಣಾಮವಾಗಿ ಆ ಐಶ್ವರ್ಯದ ಹಂಚಿಕೆಯಲ್ಲಿರುವ ಅಸಮಾನತೆ

ಯನ್ನು ಕುರಿತೂ, ಯಾರ ಕೈಗಳಲ್ಲಿ ಸಂಪತ್ತು ಶೇಖರವಾಗುವ ಗುಣವಿರುವುದೋ ಅಂಥವರ ಹೀನ ಸ್ವಭಾವವನ್ನು ಕುರಿತೂ ಅವರು ಆಳವಾಗಿ ಆಲೋಚಿಸಿದರು. ನಿದರ್ಶನಾರ್ಥವಾಗಿ ಅಪನಿಂದಾತ್ಮಕವಾದ ದಿಗ್ಭ್ರಮೆಯಿಂದ ಅವರು ಹೀಗೆ ಹೇಳಿರುತ್ತಾರೆ:

ತಾನು ಉಣ್ಣದೆ ತಕ್ಕವರಿಗೆ ಈವಗುಣವಿಲ್ಲದೆ
ಬಾಳ್ವವನ ಹೇರಳ ಹಣವು ಕುತ್ತಾಗಿ ಕೊಲ್ಲುವುದು (1006)

ಮತ್ತೊಂದು ಕಡೆ ಲೋಭಿಯಲ್ಲಿ ಹೀಗೆ ಮನವಿ ಮಾಡಿಕೊಳ್ಳುತ್ತಾರೆ:

ಆರ್ತರಿಗೆ ನೆರವೀಯದವನ ಸಿರಿಯು
ಪತಿಯೊಡನೆ ಬಾಳದ ಏಕಾಕಿತನದಲಿ
ಮುಪ್ಪುವಡೆದ ಮಿಂಗೆ ಚೆಲುವೆಯಂತೆ (1007)

ಭಿಕ್ಷುಕರಿಗೆ ಹಿತವಚನವನ್ನು ಹೇಳುತ್ತಿರುವರೋ ಎಂದು ತೋರಿಬರುವ ಹಾಗೆ ಕೃಪಣರನ್ನು ಅವರು ತರಾಟೆಗೆ ತೆಗೆದುಕೊಳ್ಳುತ್ತಾರೆ. 1067ನೆಯ ಕುರಳಿನಲ್ಲಿ ಅವರು ಹೀಗೆ ಹೇಳುತ್ತಾರೆ:

ಬೇಡುವವರಲಿ ನನ್ನದೊಂದು ಅರಿಕೆ
ಬೇಡಬಯಸಿದರು, ಕೊಡಲೊಂದು
ಮನವಿಲ್ಲದವನ ಬೇಡದಿರಿ (1067)

ಇಲ್ಲಿ ಭಿಕ್ಷುಕರನ್ನು ಗುರಿಯಾಗಿಟ್ಟುಕೊಂಡು, ವಳ್ಳುವರು ಕೊಡುಗೈಯಿಲ್ಲದ ಸಿರಿವಂತರ ಮೇಲೆ ತಮ್ಮ ತಿರಸ್ಕಾರವನ್ನು ವ್ಯಕ್ತಪಡಿಸುತ್ತಾರೆ. ಅವರು ತಮ್ಮ ದೃಷ್ಟಿಕೋನವನ್ನು ಬೇರೆಡೆಗೆ ತಿರುಗಿಸುತ್ತ ಸ್ವಾಭಿಮಾನದಿಂದ ಬೇಡಲು ಹಿಂತೆಗೆಯುವ ಗುಣಶಾಲಿಯಾದ ಬಡವನೊಬ್ಬನ ಚಿತ್ರವನ್ನು ತೋರಿರುತ್ತಾರೆ:

ಕಿರನೋಡದೆ ನಲಿದು ಕರೆದೀವ
ಕರುಣೆಯ ಕಣ್ಣುಳ್ಳವರ ಬಳಿಯು
ಬೇಡದಿರುವುದು ಕೋಟಿ ಮಡಿಲೇಸು (1061)

ಮತ್ತೊಂದು ಕಡೆ ಉದಾರಿಯಾದ ಶ್ರೀಮಂತನನ್ನು ಬೆನ್ನು ತಟ್ಟಿ ಹೊಗಳುತ್ತಾರೆ:

ಕೃಪಣತೆಯನು ಕನಸಿನಲು ನೆನೆಯದವರ
ಬಳಿಯೊಂದು ಬೇಡಿ ಪಡೆವುದು
ಈವುದನೆ ಹೋಲುವುದು (1054)

ಮತ್ತೆ ಭಿಕ್ಷುಕನ ಪರಕಾಯ ಪ್ರವೇಶ ಮಾಡುತ್ತ, ಈ ಯೋಗಿ, ಬಡತನವನ್ನು ನೆನೆದು ನಡುಗುತ್ತ ನುಡಿಯುತ್ತಾರೆ:

ನಿನ್ನೆ ಪೀಡಿಸಿ ಎನ್ನ ಬಲಿ ತೆಗೆದುಕೊಂಡ
ಬಡತನವು ಇಂದು ಮತ್ತೆ ಬರಲಿದೆಯೆ? (1048)

ಅತ್ಯಗತ್ಯವಾಗಿ ಬೇಡಬೇಕಾಗಿ ಬರುವುವನ್ನು ಕುರಿತು ಆಲೋಚಿಸುತ್ತಿದ್ದಂತೆಯೇ ವಳ್ಳುವರ ಭೀತಿ ಉಜ್ವಲ ಪ್ರಕೋಪವಾಗಿ ಪರಿಣಮಿಸುವುದು:

ಜನರು ಬೇಡಿ ತಿಂದುಂಡು ಬದುಕುವುದು
ಅವನಿಚ್ಛೆಯಾದರೆ,
ಲೋಕದೊಡೆಯನು ತಿರಿತಿರಿದು ಬೇಡಿ ಕೆಡಲಿ (1062)

ಅನಂತರ, ಅವರು ಹಣವಂತರ ಕಡೆಗೆ ತಿರುಗಿನೋಡಿ, ನೀಡುವ ಗುಣದಿಂದ ಮಾತ್ರವೇ ಪಡೆಯಬಹುದಾದ ಮಹದಾನಂದವನ್ನು ಗಳಿಸುವುದರಲ್ಲಿ ವಿಫಲರಾದ ಅವರನ್ನು ಎಚ್ಚರಿಸುತ್ತಾರೆ:

ತಮ್ಮೊಡವೆಯ ಬಚ್ಚಿಟ್ಟು ಕಳೆವ
ಕಲ್ಲು ಮನದವರಿಗೆ
ಇತ್ತು ನಲಿವ ಸುಖವರಿಯದಿಹುದೆ? (228)

ಭಿಕ್ಷಾಟನ ಸಮಸ್ಯೆಯನ್ನು ಸಾಧ್ಯವಿರುವ ಎಲ್ಲ ಹಿನ್ನೆಲೆಗಳಿಂದಲೂ ವೀಕ್ಷಿಸಿ, ಒಮ್ಮೆ ಭಿಕ್ಷುಕನ ಆತ್ಮಗೌರವವನ್ನೂ ಮತ್ತೊಮ್ಮೆ ಉಳ್ಳವರ ಕರುಣೆಗೂ ಮನವಿ ಮಾಡಿಕೊಂಡು ಪರಿಹರಿಸಲು ಪ್ರಯತ್ನಿಸುತ್ತಾರೆ.

ಶ್ರೀಮಂತರು ಸಮಕಾಲೀನ ದುರಂತದ ಪ್ರಜ್ಞೆಯುಳ್ಳವರಾಗಿರಬೇಕೆಂದೂ ನಿರ್ಗತಿಕರ ಯಾತನೆಗಳನ್ನು ಅರ್ಥಮಾಡಿಕೊಳ್ಳುವ ಅನುಕಂಪವುಳ್ಳವರಾಗಿರಬೇಕೆಂದು ವಳ್ಳುವರು ನಿರೀಕ್ಷಿಸುತ್ತಾರೆ. ಸೂಕ್ಷ್ಮವಾದ ಯಾವ ಮನುಷ್ಯನೇ ಆಗಲಿ, ಸಮಯ ಸಂದರ್ಭಗಳ ದೆಸೆಯಿಂದ ಒಂದು ಮಾನವ ಜೀವಿಯು ಅಂಗಲಾಚುವ ಸ್ಥಿತಿಗೆ ಗುರಿಯಾಗುವ ಅಪಮಾನವನ್ನೂ ಅಧೋಗತಿಯನ್ನೂ ಅನುಭವಿಸಿ ತಿಳಿಯಬೇಕು. ಒಂದು ಕುರಳಿನಲ್ಲಿ ಯೋಗಿಯ ಮಾತಿದು:

ಕೈತುಂಬಿ ಕೊಟ್ಟು
ಯಾಚಕನ ಮೊಗದಲಿ ನಗೆಯುರಳು
ಕಾಣ್ಬವರೆಗೆ
ಬೇಡಿಸಿಕೊಂಬುದು ಮನಕೆ
ಕಹಿಯೆನಿಪುದು (224)

ಅನಂತರ ಅವರು ಸಂತೋಷಭರಿತವಾದ ಸಂವೇದನೆಯಿಂದ, ಹಸಿವನ್ನು ಸಹಿಸುವ ಸಾಮರ್ಥ್ಯವನ್ನು ಹಸಿವನ್ನು ಹೋಗಲಾಡಿಸುವ ಶಕ್ತಿಯೊಂದಿಗೂ, ಹಸಿವಿನಿಂದ ನರಳುವ ನಿರ್ಗತಿಕರ ಸಾಮರ್ಥ್ಯವನ್ನು ಅದನ್ನು ತೊಡೆದು ಹಾಕಬಲ್ಲ ಧನಿಕರ ಶಕ್ತಿಯೊಂದಿಗೂ ಅಳತೆ ಮಾಡಿನೋಡಲು ತೊಡಗುತ್ತಾರೆ:

ಒಲಿಮೆಯೊಳಗೆಲ್ಲ ಹಿರಿದು ಹಸಿವನಡಗಿಪ ಬಲಿಮೆ
ಹಸಿದವರನು ತಣಿಪ ಬಲಿಮೆಯು
ಅದಕು ಹಿರಿದೆನಿಪುದು (225)

ಮುಂದೆ ವಳ್ಳುವರು ಎಲ್ಲ ಧನವಂತರು ತಮ್ಮ ಐಶ್ವರ್ಯವನ್ನು ಭದ್ರವಾಗಿ ಇಡಬೇಕಾದ ಎಡೆಯನ್ನು ತೋರಿಸುತ್ತಾರೆ:

ಆರ್ತರ ಕಡುಪಸಿಯ ತಣಿಪುದಲ್ಲವೆ
ಪಡೆದವನ ಸಿರಿಯ ಕೂಡಿಡುವ ನೆಲೆ (226)

ಕೈಯೆತ್ತಿ ಕೊಡಲು ಶಕ್ತಿಯಿಲ್ಲದಂತೆ ಮಾಡುವ ಧನಿಕರ ನಿಷ್ಕ್ರಿಯತೆಯನ್ನು ಹೀನಾಯವಾಗಿ ನಿಂದಿಸುವುದರೊಂದಿಗೆ, ಈ ಯೋಗಿಗಳು "ಈಗೈ" (ಕೊಡುಗೆ) ಎಂಬ ಅಧ್ಯಾಯವನ್ನು ಮುಕ್ತಾಯ ಮಾಡುತ್ತಾರೆ.

ಸಾವಿಗಿಂ ಘೋರವೆನಿಪುದು ಬೇರಿಲ್ಲ
ಕೊಡುವ ಶಕ್ತಿ ಕುಂದಿದೆಡೆಯಲಿ
ಸಾವೆ ಇನಿದಾಗಿ ತೋರುವುದು (230)

**ಪ್ರಭುತ್ವವನ್ನು ಕುರಿತು**

ಎಲ್ಲ ಸದ್ಗುಣ ಮತ್ತು ಸದಾಚಾರಗಳ ನಿಯಮಾನುಪಾಲನೆಯ ಹಿಂದೆ ರಾಷ್ಟ್ರ ಪ್ರಭುತ್ವದ ಶಕ್ತಿಯಿರುವುದೆಂಬ ಸಂಗತಿಯನ್ನು ವಳ್ಳುವರು ಚೆನ್ನಾಗಿ ತಿಳಿದಿದ್ದರು. 543ನೆಯ ಕುರಳಿನಲ್ಲಿ ಹೀಗೆ ಹೇಳುತ್ತಾರೆ:

ಋಷಿಗಳೊರೆದ ವೇದಗಳಿಗೆ, ಧರ್ಮನೆಡೆಗೆ
ಆಧಾರ ಬಲವೊಂದೆ
ಅರಸನ ನ್ಯಾಯದಂಡ (543)

ಅರಸನ ಕೈಯಲ್ಲಿರುವ ರಾಜದಂಡವು ದುಷ್ಟಶಕ್ತಿಯ ಸಂಕೇತವಾಗದೆ ನ್ಯಾಯ ನಿಷ್ಠೆಗಳ ಕುರುಹಾಗಿರಬೇಕೆಂದು ಅವರು ಸ್ಪಷ್ಟವಾದ ಮಾತುಗಳಲ್ಲಿ ಹೇಳಿದ್ದಾರೆ:

ಅರಸನ ವಿಜಯವನು ಸಾರುವುದು
ಶಸ್ತ್ರ ವೈಭವವಲ್ಲ;
ನೇರ್ಮೆಯಿಂ ನಡಸುವ ರಾಜದಂಡ (546)

ಇದೇ ಭಾವನೆಯನ್ನು ಅವರು ಮತ್ತಷ್ಟು ಒತ್ತಿಹೇಳುತ್ತಾರೆ:

ಧರೆಯ ರಕ್ಷಿಪನು ಅರಸನೆಂಬುವನು
ನೀತಿಧರ್ಮಗಳವನ ಅಂಗರಕ್ಷಕರು (547)

ಅರಸನಿಗಿರುವ ದಂಡನೆಯ ಅಧಿಕಾರವ್ಯಾಪ್ತಿಯ ಬಗ್ಗೆ ವಳ್ಳುವರ ವಿಚಾರವಿದು:

ಪಯಿರ ರಕ್ಷಣೆಗೆ ಕಳೆಯ ಕಿತ್ತೆಸೆವಂತೆ
ಕೊಲೆಪಾತಕಿಗಳಿಗೆ ಅರಸನು ವಿಧಿಪ
ನೇಣುಗಂಬದ ದಂಡನೆಯು (550)

ತನ್ನ ರಾಜಬಲವನ್ನು ದುರುಪಯೋಗಪಡಿಸಿಕೊಂಡು ಅರಸನು ಪ್ರಜೆಗಳಿಂದ ಧನಸಂಗ್ರಹಿಸುವುದನ್ನು ವಳ್ಳುವರು ಒಪ್ಪುವುದಿಲ್ಲ.

ಅರಸುದಂಡವ ಮುನ್ನಿಟ್ಟು
ಜನರ ಸುಲಿಯುವುದು
ಶಸ್ತ್ರವನು ತೋರಿ ಇಡು ಎಂದು
ಬೆದರಿಸುವ ಸುಲಿಗೆಗಳ್ಳನ ಪರಿಯೆನಿಸುವುದು (552)

ನ್ಯಾಯ ಮತ್ತು ಶಿಸ್ತುಗಳನ್ನು ಪರಿಪಾಲಿಸಲು ಅಸಮರ್ಥನಾದ ರಾಜನನ್ನು ಕುರಿತಂತೆ ಅವರು ಹೀಗೆ ಹೇಳಿರುತ್ತಾರೆ: "ಯಾವ ಸಾಮ್ರಾಜ್ಯದಲ್ಲಿ ರಾಜನು ನ್ಯಾಯವನ್ನು ಸಲ್ಲಿಸುವುದಿಲ್ಲವೋ ಅಲ್ಲಿ ಐಶ್ವರ್ಯವು ಬಡತನಕ್ಕಿಂತಲೂ ನಿಕೃಷ್ಟವಾದದ್ದು". ನ್ಯಾಯವನ್ನು ದಯೆಯಿಂದ ಹದಗೊಳಿಸಬೇಕೆಂದೂ ಆ ಮೂಲಕ

ಜನತೆಯನ್ನು ಬೆದರಿಸಲಾಗದೆಂದೂ ಅವರು ಪ್ರಭುತ್ವಕ್ಕೆ ಕರೆಯಿತ್ತರು. ಅವರು ದೊರೆಯನ್ನು ಕುರಿತು ಹೇಳುವುದೇನೆಂದರೆ:

ದಂಡನೆಯ ಕೋಲ ಮೇಲೆತ್ತಿ
ಮೆಲ್ಲನಿಳಿಯಬಿಡಬೇಕು
ನಿಡುಗಾಲ ಸಿರಿಯೊಡನೆ
ಆಳ ಬಯಸುವವರು (562)

ರಾಗ ಮೇಳವಿಲ್ಲದಿರೆ ಒರೆವ
ಗಾನದಿಂ ಫಲವೇನು?
ಕರುಣೆಯ ಕಣ್ಣೋಟವಿಲ್ಲದಿರೆ ಕಣ್ಣ
ಪಡೆದು ಫಲವೇನು? (573)

ರಾಜ–ಪ್ರಜೆ ಇಬ್ಬರಿಗೂ ಅನ್ವಯಿಸುವ ಹಾಗೆ ಬೋಧಿಸುತ್ತ ಉಪಮೆಯೊಂದರ ನೆರವನ್ನು ಪಡೆದು ಅವರು ಹೀಗೆ ನುಡಿದಿರುವರು:

ನೀರಿನಳವಿಗೆ, ಹೂವಿನ ಕಾಂಡದ ನೀಳ
ಮನದರಿವಿನಳವಿಗೆ ಹಿರಿಮೆಯ ಎತ್ತರವು (595)

ಸ್ಥೈರ್ಯವನ್ನು ಕುರಿತು ಹೇಳುವ ಮಾತುಗಳಿವು :
ಸುಖವ ನೆರೆ ಪೋಷಿಸದವನು
ದುಃಖ ಸಹಜವೆಂದರಿತವನು
ಸಂಕಟದಿ ಪಾಡು ಪಡುವುದೊಂದಿಲ್ಲ (628)

ಅವರು ಮತ್ತೆ ಹೇಳಿರುವ ನುಡಿಗಳಿವು :
ಬಂದ ಕಾಲದಲಿ ಹಿಗ್ಗಿ ನಲಿದಾಡದವನು
ಸುಖ ದುಃಖದಲಿ ಕುಗ್ಗಿ ವ್ಯಥೆ ಪಡುವುದಿಲ್ಲ (629)

**ವ್ಯವಸಾಯ**

ವ್ಯವಸಾಯವನ್ನು ವಳ್ಳುವರು, ದುಡಿಮೆಯಲ್ಲೆಲ್ಲ ಗೌರವಾನ್ವಿತ ದುಡಿಮೆಯೆಂದು ಮೆಚ್ಚಿಕೊಂಡಿರುವುದು ಮಾತ್ರವಲ್ಲದೆ ಹೇರಳ ಫಲ ನೀಡುವ ಸ್ವತಂತ್ರವಾದ ಬದುಕಿನ ಮಾರ್ಗವೆಂದು ಪರಿಗಣಿಸುತ್ತಾರೆ. ಅವರು ಹೇಳುವುದೇನೆಂದರೆ:

ಭುವಿ ಸುತ್ತು ತಿರುಗಿದರು
ನೇಗಿಲ ವೇಗಕದು ಸಾಟಿಯೆನಿಸದು
ಬೆವರಿಳಿಸಿ ದಣಿದರು
ಉಳುವ ದುಡಿಮೆಯೆ ಮೇಲೆನಿಪುದು (1031)

ಮುಂದಿನ ಕುರಳಿನಲ್ಲಿ ಅವರು ನುಡಿವುದೇನೆಂದರೆ :

ಉಳಿದಿರುವ ಸಮಸ್ತ ಜನರ ಭಾರವನು ಹೊತ್ತುದರಿಂ
ಭುವಿತೇರನಚ್ಚಿಗೆ ಕೀಲು ಮೊಳೆಯಂತಿರ್ಪನುಳುವವನು (1032)

1033ನೆಯ ಕುರಳಿನಲ್ಲಿ ಇನ್ನೂ ಮುಂದುವರಿದು ಅವರು ಹೇಳುವುದೇನೆಂದರೆ :

ಉತ್ತುಂಡು ಬಾಳುವರೆ ಬಾಳುವರು
ಉಳಿದವರು ಪರಭಿಕ್ಷೆಯುಲಿ
ಕೊಟ್ಟ ಉಪ್ಪುಣ್ಣುವರು (1033)
ಉಣಲು ಇಲ್ಲವೆಂದು ಶೋಕಿಸುತ
ಆಲಸದಲಿರುವವರ ಕಂಡು
ಗುಣಭರಿತೆ ನೆಲವೆಣ್ಣು
ನಗುತಿರುವಳು (1040)

**ಗೆಳೆತನ**

ವಳ್ಳುವರಂಥ ಆತ್ಮ ನವೀಕರಣ ಶಕ್ತರಾದ ಯೋಗಿಗಳು ಇತರರೊಂದಿಗೆ ಪರಸ್ಪರ ಮತ್ತು ಫಲಪ್ರದವಾದ ಬಾಂಧವ್ಯವನ್ನು ಬೆಳೆಸುವುದು ಸ್ವಭಾವ ಜನ್ಮವಾದುದು. ಅವರು ಪ್ರೀತಿಯನ್ನು ಪಡೆಯಬಲ್ಲರು ಮತ್ತು ಅದನ್ನು ನೀಡಲೂ ಶಕ್ತರು.

ಸ್ನೇಹವು ವ್ಯಕ್ತಿಯ ಏಕಾಕಿತನದ ಕಠಿನತೆಗಳನ್ನು ಕರಗಿಸುತ್ತದೆ ಮತ್ತು ಹೊಸ ಆಯಾಮಗಳನ್ನು ತೆರೆದು ತೋರಿಸುತ್ತದೆ. ಇನ್ನೊಂದು ಕಡೆ, ಯಾವ ಜನರು ತಮಗೆ ತಾವೇ ಅಪರಿಚಿತರಾಗಿವರೋ ಅವರು ಚೈತನ್ಯಕ್ಕಾಗಿ ತಮ್ಮದೇ ಆದ ಉತ್ಸಾಹದ ಚಿಲುಮೆಗಳತ್ತ ಪುನಃ ಹೋಗಲಾರರು. ಏಕೆಂದರೆ, ಅವರು ಆತ್ಮ ನವೀಕರಣದ ಸಾಮರ್ಥ್ಯವನ್ನು ಕಳೆದುಕೊಂಡಿರುತ್ತಾರೆ. ಆದ್ದರಿಂದ ವಳ್ಳುವರು ಹೇಳಿರುವುದು ಸರಿಯಾಗಿದೆ.

ಸ್ನೇಹಗಳಿಕೆಯಿಂ ಮಿಗಿಲರಿದು ಬೇರಿಲ್ಲ
ಹಗೆಗಳೊಡ್ಡುವ ಬಲೆಯಿಂ ರಕ್ಷಿಪುದು
ಸ್ನೇಹವಲ್ಲದೆ ಮತ್ತೆ ಬೇರಿಲ್ಲ (781)

ಮೈಲಾಪುರದಲ್ಲಿದ್ದ ತಮ್ಮ ಕುಟೀರದಲ್ಲಿ ವಳ್ಳುವರು ಹಲವಾರು ಯೋಗಿವರೇಣ್ಯರು ಮತ್ತು ದಾರ್ಶನಿಕರ ಮೈತ್ರಿಯಿಂದ ತಮ್ಮ ಹೃದಯವನ್ನು ಹುರುಪುಗೊಳಿಸಿದ್ದಾರೆ.

ಸುಜ್ಞಾನ ಗ್ರಂಥ ಪಠನದಿಂ
ಮನವರಳುತ್ತ ಹೋದಂತೆ
ಸಜ್ಜನರ ಸಂಗವದು ಪಳಗುತ್ತ
ಮನ ಸಂಪದವನಡರುವುದು (783)

ಸ್ನೇಹದಲಿ ಸುಖದ ನಗೆಯೊಂದೆ ಗುರಿಯಲ್ಲ
ಹಾದಿ ತಪ್ಪಿದ ನೇಹಿಗನ ನಿಷ್ಠುರದ ನುಡಿಯಲಿ
ಹಾದಿಗೂಡಿಸುವುದದರ ಗುರಿ (784)

ಅತಿಬಳಕೆಯಿಂ ಸಲಿಗೆಯನು ತೋರುವುದೇಕೆ?
ಅಂತರಂಗದಿ ಬೆಸೆದು ಅರಿತು ಬಾಳುವುದೆ ಕೆಳೆಯು (785)

ಕೇಡಿನ ನಡೆಯಿಂ ತಿದ್ದಿ ಹಾದಿಗೆಳೆತಂದು
ಸಂಕಟದಲಿ ಸಮಪಾಲು ಪಡೆವುದು ಕೆಳೆಯು (787)

**ವಳ್ಳುವರ ಮೇರೆಗೆ :**

ತೊಟ್ಟ ಉಡುಗೆಯು ನಡುವಿನಿಂ ಜಾರೆ
ಕ್ಷಣದಿಂ ಕೈಯುದನು ಪಿಡಿದುಕೊಳ್ವಂತೆ
ಸಂಕಷ್ಟದಲಿ ಒಡನೆ ಸ್ಪಂದಿಪುದು ಕೆಳೆಯು (788)

ಮೈತ್ರಿಗೆ ಆಪತ್ತೇ ಒಳ್ಳೆಯ ಒರೆಗಲ್ಲು ಎಂಬುದಾಗಿ ತಿರುವಳ್ಳುವರು ಭಾವಿಸುವರು. ಏಕೆಂದರೆ ಅನೇಕ ಸ್ನೇಹಿತರು ಸಂಪತ್ತಿರುವಾಗ ನಿಮ್ಮ ಸುತ್ತಲೂ ಗುಂಪುಗೂಡುವರು; ನೀವು ವಿಪತ್ತಿನಲ್ಲಿದ್ದಾಗ ದೂರ ಸರಿಯುವರು.

ವಿಷಾದಪೂರ್ಣವಾದ ನಗೆಯೊಡನೆ ತಿರುವಳ್ಳುವರು ಈ ವಿವೇಕ ರತ್ನವನ್ನು ಎಸೆದಿರುವರು:

ಕೇಡಿನಲಿ ಒಂದು ಒಳ್ಳೆಯ ಗುಣವುಂಟು
ಕೆಳೆಯನಂತರಂಗವನು ಹಾಸಿ ಅಳೆಯಲದು
ಅಳತೆಗೋಲೆನಿಪುದು (796)

ಪ್ರೀತಿಯಲಿ ನಡೆದು ಗೆಳೆತನದಿ ಪಳಗಿದವರು
ಸಮಯದಲಿ ಕೆಳೆಯ ಕೈಬಿಟ್ಟು ನಡೆದರು
ಪ್ರೀತಿಯನು ಬಿಡರು (807)

ಕಲಿಸದ ಕುದುರೆಯು ಪೋರ್ಕಳದಿ ಕಲಿಯು ಕೆಡವಿ
ದೌಡಾಯಿಸುವ ತೆರದಿ
ಕೈಬಿಟ್ಟು ನಡೆವ ಕೆಳೆಗಿಂತ ಒಂಟಿತನವೆ ಲೇಸು (814)

ವಳ್ಳುವರು ಮೂರ್ಖನ ಗೆಳೆತನಕ್ಕೂ ಮೇಧಾವಿಯ ಹಗೆತನಕ್ಕೂ ಇರುವ ಸ್ಪಷ್ಟವಾದ ಅಂತರವನ್ನು ಗ್ರಹಿಸಿ ಹೀಗೆ ಹೇಳುತ್ತಾರೆ :

ಅರಿವಿಲ್ಲದವನ ಅತಿಸಲಿಗೆಯು ಕೆಳೆಗಿಂತ
ಅರಿವುಳ್ಳವನ ಹಗೆತನವೆ ಕೋಟಿಮಡಿ ಮೇಲು (816)

ನಿಮ್ಮನ್ನು ಎದುರಿನಲಿ ಪ್ರೀತಿಸಿ ಕಣ್ಮರೆಯಲ್ಲಿ ತೆಗಳುವಂಥವರ ಗೆಳೆತನವನ್ನು ವಳ್ಳುವರು ಕಟುವಾಗಿ ಖಂಡಿಸಿರುತ್ತಾರೆ (ಕುರಳು-820).

ವಾಸ್ತವಿಕವಾಗಿ, ಕುರಳಿನಲ್ಲಿರುವ ಐದು ಅಧ್ಯಾಯಗಳಲ್ಲಿ ವಳ್ಳುವರು ಮೈತ್ರಿಯ ಮನೋಧರ್ಮವನ್ನು ಆಳವಾಗಿ ವಿಶ್ಲೇಷಿಸಿರುತ್ತಾರೆ. ಜೀವನದ ಬೂಟಾಟಿಕೆತನವನ್ನು ಉಗ್ರವಾಗಿ ಖಂಡಿಸಿ ಅವರ ರೌದ್ರ ನೈಜತೆಯನ್ನು ತೆರೆದು ತೋರಿರುತ್ತಾರೆ.

## ಶಿಕ್ಷಣ

ಕಾರ್ಲ್‌ಮಾರ್ಕ್, ನೀಷೆ ಮತ್ತು ಜೀನ್‌ಪಾಲ್ ಸಾರ್ತ್ರೆ ಅವರಂತೆ ವಳ್ಳುವರು ಕೂಡ ಅಸ್ತಿತ್ವವಾದದಲ್ಲಿ ನಂಬಿಕೆ ಉಳ್ಳವರು. ಏಕೆಂದರೆ, ಅವರಂತೆಯೇ ಯಾವ ಜ್ಞಾನವು ಮಾನವನ ಅನುಭವಕ್ಕೇ ನೇರವಾಗಿ ಸಂಬಂಧಿಸಿರುವುದೋ ಆ ಜ್ಞಾನವೇ ಬೆಲೆಬಾಳತಕ್ಕುದೆಂದು ಅವರು ಅಭಿಪ್ರಾಯವಿಟ್ಟುಕೊಂಡಿದ್ದರು. ವಳ್ಳುವರ ಪ್ರಕಾರ ಮಾನವನ ಬದುಕನ್ನು ಉತ್ತಮ ಪಡಿಸುವುದೆ ಶಿಕ್ಷಣದ ಪರಮೋಚ್ಚ ಗುರಿ. ಬದುಕಿಗೆ ಸಂಬಂಧವಿಲ್ಲದೆ ಅಸಂಗತವೆನಿಸಿದ ಯಾವ ಶಿಕ್ಷಣವೇ ಆಗಲಿ ಅದನ್ನು ನಿರರ್ಥಕವೆಂದು ಅವರು ತಿರಸ್ಕರಿಸಿದ್ದಾರೆ. 391ನೆಯ ಕುರಳಲ್ಲಿ ಅವರು ಹೇಳುತ್ತಾರೆ :

ಕಲಿಯಬೇಕಾದುದನು ಕುಂದಿಲ್ಲದೆ ಕಲಿಯಬೇಕು
ಕಲಿತ ಬಳಿಕ ತಕ್ಕಂತೆ ನಡೆದುಕೊಳ್ಳಬೇಕು (391)

ಮಾನವನ ಇತಿಹಾಸದಲ್ಲಿ ಅಂಕಗಳು ಮತ್ತು ಅಕ್ಷರಗಳ ಅನ್ವೇಷಣೆಗೆ ಮಾನವನ ಪ್ರಗತಿಗೆ ಅತ್ಯಂತ ಪ್ರಮುಖವಾದ ಸಂಶೋಧನೆಯೇ ಸರಿ. ಆದ್ದರಿಂದ

ವಳ್ಳುವರು ವ್ಯಕ್ತಪಡಿಸುವುದೇನೆಂದರೆ :

ಗಣಿತಾಕ್ಷರಗಳೆರಡು ಉಸಿರೊಡನೆ ಬಾಳ್ವ
ಮಾನವಗೆರಡು ಕಣ್ಣುಗಳಿರುವಂತೆ (392)

ಶಿಕ್ಷಣವು ಮಾನವನ ಕಣ್ಣುಗಳನ್ನು ತೆರೆಸುತ್ತದೆಂದು ವಳ್ಳುವರು ಹೇಳುತ್ತಾರೆ:

ಕಲಿತರೆ ಕಣ್ಣುಳ್ಳವರು
ಕಲಿಯದವರ ಮುಖದಲಿ
ಕಾಂಬೆರಡು ಕಣ್ಣುಗಳು ಹುಣ್ಣುಗಳು (393)

ಶಿಕ್ಷಣದ ವಿಚಾರದಲ್ಲಿ ಆಧುನಿಕ ವಿಚಾರಧಾರೆಯನ್ನು ವಳ್ಳುವರು ತಿಳಿಯದೆ ಇರಲಿಲ್ಲವೆಂಬುದಕ್ಕೆ ಈ ಕೆಳಗಿನ ಕುರುಳೇ ಸಾಕ್ಷಿ.

ಮಳಲು ತೋಡಿದಳವಿಗೆ ಬಾವಿಯಲು ನೀರು ಒಸರುವುದು
ಕಲಿತವರಿಗೆ ಅಂತೆ ಅರಿವಿನೊರತೆಯು (396)

ಕಲಿಕೆಯು ಮಾನವನಿಗೆ ಗೌರವಪ್ರದವೆಂದು ತಿಳಿದೂ ಸಾಯುವ ತನಕ ಅದನ್ನು ಗಳಿಸುವ ಲಕ್ಷ್ಯವಿಲ್ಲದವರನ್ನು ಕಂಡು ಈ ಯೋಗಿಗಳು ಕನಿಕರ ವ್ಯಕ್ತಪಡಿಸುತ್ತಾರೆ :

ಕಲಿತವಗೆ ಹೋದಲಿ ದೇಶ, ಊರೆಂದು ತಿಳಿದೂ
ಕಾಲನಪ್ಪುವ ಮುನ್ನ ಕಲಿಯದಿರುವುದೇಕೆ ? (397)

ಕಲಿಕೆಯು ಅರಿವುಳ್ಳವರಿಗೆ ಆನಂದವನ್ನು ನೀಡುತ್ತದೆ. ಕಲಿತವರು ತಮ್ಮ ಆನಂದವನ್ನು ಪ್ರಪಂಚಕ್ಕೆ ಕೊಡುವುದರ ಮೂಲಕ ಹಂಚುವರು.

ತಮ್ಮ ಸಂತೋಷದಲಿ ಲೋಕ ಸುಖಿಸುವುದ ಕಂಡು
ಮತ್ತಷ್ಟು ಅರಿವ ಗಳಿಸಿ ಹಂಚುವರಂ (399)

ಅವಿದ್ಯಾವಂತರು ವಿದ್ಯಾವಂತರಿಗಿಂತಲೂ ಭಿನ್ನವಾದ ಪ್ರಾಣಿ ವರ್ಗಕ್ಕೆ ಸೇರಿದವರೆಂಬುದು ಈ ಯೋಗಿಗಳ ಎಣಿಕೆ.

ಬೆಳಕೀವ ವಿದ್ಯೆಯನು ಕಲಿತವರ ಮುಂದೆ
ಮನುಕುಲದ ಮೃಗಗಳು ಕಲಿಯದವರು (410)

ವಿದ್ಯೆಯನ್ನು ಕಣ್ಣಿಂದ ನೋಡಿ ಗ್ರಹಿಸುವುದಕ್ಕಿಂತಲೂ ಕಿವಿಯಾರೆ ಕೇಳಿ ಮನನ ಮಾಡಿಕೊಳ್ಳುವುದು ಉತ್ತಮವೆಂದು ವಳ್ಳುವರು ಸರಿಯಾಗಿಯೇ ನಂಬಿದ್ದರು.

ಶುಷ್ಕ ಮುದ್ರಣಾಕ್ಷರಗಳನ್ನು ಓದುವುದಕ್ಕಿಂತಲೂ ವಿದ್ವಾಂಸರ ವಿವರಣೆಯನ್ನು ಕೇಳುವುದು ಹೆಚ್ಚು ಫಲಪ್ರದವೆಂದು ಅವರ ಅಭಿಮತ.

ಪ್ರಾಚೀನ ತಮಿಳುನಾಡಿನಲ್ಲಿ ಮುದ್ರಿತ ಪುಸ್ತಕಗಳು ದೊರೆಯುತ್ತಿರಲಿಲ್ಲ. ಅನೇಕ ಕೃತಿಗಳು ತಾಳೆಗರಿಗಳ ಮೇಲೆ ಕೊರೆಯಲ್ಪಟ್ಟು ಶೇಖರಿತವಾಗುತ್ತಿದ್ದುವು. ಒಬ್ಬನು ತಾಳೆಗರಿಯ ಬರಹವನ್ನು ಓದಲು ಅಶಕ್ತನಿರಬಹುದು. ಆದರೂ ಅವನು ಅನೇಕ ವರ್ಷಗಳಿಂದ ತಿಳಿವಳಿಕೆ ಮತ್ತು ಅನುಭವವುಳ್ಳವರ ಸತ್ಯಾಂಶಗಳನ್ನು ಕೇಳಿಕೇಳಿ ವಿದ್ಯಾವಂತರೆನ್ನಿಸಿರಬಹುದು. ಆದ್ದರಿಂದ ವಳ್ಳುವರು 411ನೆಯ ಕುರಳಿನಲ್ಲಿ ಹೇಳುವುದೇನೆಂದರೆ:

ಕಿವಿಯಾರೆ ಕೇಳರಿವ ಸಿರಿಯು
ಸಿರಿಯೊಳಗೆ ಸಿರಿಯೆನಿಪ್ಪುದು
ಸಿರಿಸಂಪದಗಳ ನಡುವೆ ಅದುವೆ
ವಿರಾಜಿಪುದು (411)

ವಳ್ಳುವರು ಮುಂದುವರಿದು ಹೊಟ್ಟೆಗೆ ತೆಗೆದುಕೊಳ್ಳುವ ಆಹಾರವನ್ನು ಕಿವಿಯಿಂದ ಗ್ರಹಿಸುವ ಆಹಾರಕ್ಕಿಂತಲೂ ಬಹುಮಟ್ಟಿಗೆ ಅಲ್ಪವೆಂದು ಭಾವಿಸುವರು:

ಕಿವಿಗೆ ಉಣವು ಇಲ್ಲವೆಂದಾದರೆ
ಹೊಟ್ಟೆಗೂ ಸ್ವಲ್ಪವೇ ಉಣವು ಸಾಕು (412)
ಕಲಿಯದವನಾದರೂ ಕಲಿತವರಿಂ
ಕೇಳರಿಯಬೇಕು
ಸಂಕಟದ ಸಮಯದಲಿ ಅವಗೆ ಅದು
ಊರುಗೋಲಾಗುವುದು (414)

ಆಡುವವನ ನಡತೆಯನ್ನನುಸರಿಸಿ ಮಾತಿನ ಶಕ್ತಿ ವ್ಯತ್ಯಾಸವಾಗುತ್ತದೆಂಬುದು ವಳ್ಳುವರ ಅಭಿಪ್ರಾಯ. ಅವರದನ್ನು ಇಲ್ಲಿ ವ್ಯಕ್ತಪಡಿಸಿದ್ದಾರೆ:

ಗುಣಶೀಲವುಳ್ಳವರ ನಾಲಗೆಯಿಂ
ಉದುರಿದ ಸೊಲ್ಲುಗಳು
ಕುಸಿವ ಇಳಿಜಾರು ನೆಲದಲಿ
ಊರುಗೋಲೆನಿಸುವುದು (415)

ಇನ್ನೊಬ್ಬರ ಮಾತನ್ನು ಏಕಾಗ್ರಚಿತ್ತದಿಂದ ಕೇಳುವುದು ಸುಸಂಬದ್ಧವಾದ ಭಾಷಣವನ್ನು ಮಾಡುವಷ್ಟೆ ಕಠಿಣವೆಂಬ ಸಂಗತಿಯನ್ನು ವಳ್ಳುವರು ತಿಳಿದಿದ್ದರು.

ಆದ್ದರಿಂದ ಕೇಳುವ ಕಲೆಯನ್ನು ಅಭ್ಯಾಸ ಮಾಡಬೇಕು; ಇಲ್ಲದಿದ್ದರೆ ಒಂದು ಕಿವಿಯಿಂದ ಕೇಳಿದ್ದು ಇನ್ನೊಂದು ಕಿವಿಯಿಂದ ಹಾದುಹೋಗಿ ಮನಸ್ಸಿನ ಮೇಲೆ ಯಾವ ಪ್ರಭಾವವನ್ನೂ ಮಾಡದೆ ಹೋಗಬಹುದು. 418ನೆಯ ಕುರಳಿನಲ್ಲಿ ವಳ್ಳುವರು ಹೀಗೆ ಹೇಳುತ್ತಾರೆ:

ಕೇಳಿ ಕೇಳಿ ಸಂಸ್ಕಾರ ಪಡೆಯದ ಕಿವಿ
ಕೇಳಿಯೂ ಕೇಳದ ಕಿವುಡು ಕಿವಿಯಂತೆ (418)

ಬಾಯಿಂದ ಒಂದು ಪದಾರ್ಥವನ್ನು ಸವಿಯುವುದರಲ್ಲಿ ಮನುಷ್ಯನೂ, ಪ್ರಾಣಿಯೂ ಸಮಭಾಗಿಗಳು. ಆದ್ದರಿಂದ ವಳ್ಳುವರು ವ್ಯಗ್ರರಾಗಿ ಸಮರ್ಥಿಸುವುದೇನೆಂದರೆ:

ಕಿವಿ ಸವಿಯ ಸ್ವಾದಿಸದೆ ನಾಲಗೆಯ ಸವಿಗೆ
ಮರುಳಾದ ಜನರು ಇದ್ದರೇನು ಸತ್ತರೇನು ? (420)

### ದುಷ್ಟ ಸ್ವಭಾವ

ದುಷ್ಟರ ಬಗ್ಗೆ ಅವರಿಗಿರುವ ಅಸಹನೆಯನ್ನು ವಳ್ಳುವರು ಈ ಕೆಳಗಿನ ಕುರಳಲ್ಲಿ ಭಟ್ಟಿಯಿಳಿಸಿದ್ದಾರೆ:

ಕೀಳು ಜನರು ಮನುಜ ರೂಪವನೆ ಹೋಲುವರು
ಈ ಬಗೆಯ ಅಣಕವನು ನಾವು ಕಂಡುದಿಲ್ಲ (1071)

ಸ್ವಲ್ಪವಾದರೂ ಪಶ್ಚಾತ್ತಾಪವಿಲ್ಲದೆ ಸರ್ವಸ್ವತಂತ್ರವಾಗಿರುವ ದುಷ್ಟರನ್ನು ಕಂಡು ಅವರು ಅಸೂಯೆಯಿಂದ ಹಂಗಿಸುತ್ತಾರೆ:

ಮನದ ಕಳವಳಕೆ ಸ್ಪಂದಿಸದ ಕಾರಣ; ಅಲ್ಪರು
ಸದ್ಗುಣ ಶೀಲದಿಂ ಸುಖಿಗಳೆನಿಪರು (1072)

ದುಷ್ಟರಿಗೆ ಯಾವ ಧರ್ಮಸೂಕ್ಷ್ಮಗಳೂ ಇಲ್ಲ; ಭಯ ಇಲ್ಲವೆ ಲಾಭದಾಶೆ ಹೊರತೂ ಬೇರಾವುದೂ ಅವರನ್ನು ಬಗ್ಗಿಸುವುದಿಲ್ಲ.

ಅಲ್ಪರ ಋಜು ನಡೆಗೆ ಅರಸು ದಂಡನೆ ಭೀತಿ
ಕಾರಣವೆನಿಸಬಹುದು
ಲಾಭಗಳಿಕೆಯ ಆಶೆಯೂ ಕಿರಿದಳವು ಅವರಲಿ
ದುಷ್ಟತನದಿಂ ದೂರವಿರಿಸಬಹುದು (1075)

ಮನುಷ್ಯರು ಫಲಕೊಡುವ ಮರವನ್ನು ನೀರೆರೆದು ಪೋಷಿಸುವುದಕ್ಕೆ ಕಾರಣ ವೆಂದರೆ ಆ ಮರವು ತನ್ನಲ್ಲಿರುವ ಮಧುರ ಗುಣವನ್ನು ರಹಸ್ಯವಾಗಿ ಅಡಗಿಸಿಟ್ಟು ಹಣ್ಣಿನ ರೂಪದಲ್ಲಿ ಅದನ್ನು ನೀಡುತ್ತದೆ. ಆದರೆ ಕಬ್ಬಿನ ಜಲ್ಲೆಯು ಮಾಧುರ್ಯ ವನ್ನು ತನ್ನೊಡಲಿನೊಳಗೇ ಶೇಖರಿಸಿಟ್ಟುಕೊಳ್ಳುವುದರಿಂದ ಜನರು ಅದನ್ನು ಅರೆದು ಅದರ ಸಿಹಿ ರಸವನ್ನು ತೆಗೆಯುವರೆಂದು ವಳ್ಳುವರು ಹೇಳುತ್ತಾರೆ:

ಕೊರತೆಯನು ಹೇಳಿಕೊಂಡೊಡನೆ ಸಜ್ಜನರು
ನೆರವಿಗೊದಗುವರು; ದುರ್ಜನರು
ಕಬ್ಬಿನ ಜಲ್ಲೆಯ ತೆರದಿ ಅರೆದು ಜಜ್ಜಿದ ಬಳಿಕ
ನೆರವಿಗೋಡಿಬರುವರು (1078)

ವಳ್ಳುವರಿಗೆ ಮಹಾತ್ಮರುಗಳ ಮೇಲೆ ಎಷ್ಟು ಗೌರವ ಮರ್ಯಾದೆಗಳೋ ದುಷ್ಟರನ್ನು ಕಂಡರೆ ಅಷ್ಟೇ ತೀವ್ರವಾದ ತಿರಸ್ಕಾರ:

ಕೀಳು ನಡೆಯುವರಾವುದಕ್ಕೆ ಪಾತ್ರರು ?
ಸಂಕಟದ ಸಮಯದಲಿ ತಮ್ಮನೆ
ಮಾರಿಕೊಂಡುಂಬುವರು (1080)

ದುಷ್ಟರ ಸ್ನೇಹ ವಳ್ಳುವರಿಗೆ ವ್ಯಾ ನಡುಕ ಹುಟ್ಟಿಸುತ್ತದೆ. ಏಕೆಂದರೆ ಅವರಲ್ಲಿ ಹಲವರು ವಳ್ಳುವರ ಹೃದಯವನ್ನು ಕೊರೆದು ಒಳಹೊಕ್ಕು ಕಟ್ಟಕಡೆಯಲ್ಲಿ ಕೈಬಿಟ್ಟಿರುವರು ಅವರ ಕಹಿ ಅನುಭವವೇ ಘನೀಭೂತವಾದಂತಿರುವ ಕುರಳಿನ ರತ್ನವೊಂದು ಇಲ್ಲಿದೆ:

ಕನಸಿನಲು ದುಃಖವನೆ ತರುವುದು
ನಡೆ ಬೇರೆ ನುಡಿ ಬೇರೆಯಾದವರ ನಂಟು (819)

### ವಳ್ಳುವರ ಉಪಮೆಗಳು

ತಮಗೇ ವಿಶಿಷ್ಟವಾದ ದೃಷ್ಟಾಂತ ಮತ್ತು ಉಪಮೆಗಳನ್ನು ಕೊಡುವುದರಲ್ಲಿ ವಳ್ಳುವರು ಸಿದ್ಧಹಸ್ತರು. ಚಂಚಲಚಿತ್ತರಾದ ಅರಸುಗಳೊಂದಿಗೆ ಮಂತ್ರಿಗಳಾಗಿ ಇರುವವರು ಹೇಗೆ ನಡೆದುಕೊಳ್ಳಬೇಕು ಎಂದು ಅವರನ್ನುದ್ದೇಶಿಸಿ ಹೇಳುತ್ತಾರೆ:

ವಿಪರೀತ ಬುದ್ಧಿಯರಸರುಗಳ ಸೇರಿ
ಬಾಳ ಬಯಸುವವರು ಚಳಿಯೊಳು
ಬೆಂಕಿ ಕಾಯಿಸುವ ತೆರದಿ
ಅಗಲದೆಯು ಅಣುಗದೆಯು ಇರಬೇಕು (691)

ವ್ಯಕ್ತಿಯೊಬ್ಬನು ಉನ್ನತ ಸ್ಥಾನದಲ್ಲಿದ್ದಾಗ ಎಲ್ಲರೂ ಅವನನ್ನು ಆರಾಧಿಸುವರು ಆದರೆ ಅಧಿಕಾರದಿಂದಿಳಿದ ಕೂಡಲೆ ಅವನನ್ನು ಆರಾಧಿಸುವವರೆಲ್ಲ ಅವಹೇಳನ ಮಾಡತೊಡಗುವರು. ಈ ಕ್ರಿಯೆಯನ್ನು ವಿವರಿಸಲು ವಳ್ಳುವರು ಅಪೂರ್ವವಾದ ಉಪಮೆಯನ್ನು ನೀಡುತ್ತಾರೆ.

ಕೂದಲು ತಲೆಯಲ್ಲಿ ಇರುವವರೆಗೂ ಅದನ್ನು ಜನರು ಭಕ್ತಿಪೂರ್ವಕವಾಗಿ ಆರೈಕೆ ಮಾಡುವರು. ಆದರೆ ಅದು ತಲೆಯಿಂದ ಉದುರಿದ ಒಡನೆಯೇ ಅವಹೇಳನಾಸ್ಪದ ವಸ್ತುವಾಗಿ ಪರಿಣಮಿಸಿ, ಅದನ್ನು ಗುಡಿಸಿ ಒಗೆಯುವರು.

ತಲೆಯಿಂದುದುರಿದ ಕೂದಲೆಳೆಯಂತಾಗುವರು
ನೆಲೆತಪ್ಪಿ ಬಿದ್ದ ಮಾನವರು (964)

ಭಾಷಾ ವಿಜ್ಞಾನಿಯಂತೆ ಎಲ್ಲ ಧ್ವನಿಗಳಿಗೂ 'ಅ' ಕಾರವೇ ತಳಹದಿಯೆಂದು ವಳ್ಳುವರು ಬಲ್ಲರು. ವಿಶ್ವದ ಮೂಲವನ್ನು ಕುರಿತು ಚಿಂತಿಸುತ್ತಿರುವಲ್ಲಿ ಅವರ ಮನಸ್ಸಿನಲ್ಲಿ ಅತ್ಯಪೂರ್ವವಾದ ಒಂದು ಹೋಲಿಕೆ ಹಾದು ಹೋಗುವುದು:

ಅಕಾರವೆ ಅಕ್ಷರಗಳಿಗೆಲ್ಲ ಮೊದಲು
ಲೋಕವ್ಯಾಪಾರಕ್ಕೆ ಮೂಲ ಆದಿ ಭಗವಂತ (1)

**ಮಾರ್ಗ ಶುದ್ಧಿ**

ಅಶುದ್ಧವಾದ ಮಾರ್ಗದ ಮೂಲಕ ಒಳ್ಳೆಯ ಗುರಿಯನ್ನು ಸಾಧಿಸಬಹುದೆಂದು ವಳ್ಳುವರು ಎಂದೂ ಭಾವಿಸಿರಲಿಲ್ಲ.

ತೆರನರಿತು ಕೇಡಿಲ್ಲದೆ ಬಂದ ಸಿರಿಯು
ಧರ್ಮಸುಖದ ನೆಲೆಗಳನೀವುದು (754)

ನಾವು ಮನಃಶುದ್ಧಿ ಮತ್ತು ಕ್ರಿಯಾಶುದ್ಧಿಗಳನ್ನು ಪಡೆಯುವ ಸಲುವಾಗಿ ಸರ್ವದಾ ಶುದ್ಧಚಿತ್ತರ ಸಹವಾಸದಲ್ಲಿರಬೇಕೆಂದು ವಳ್ಳುವರು ಒತ್ತಾಯ ಮಾಡುತ್ತಾರೆ:

ಮನಃಶುದ್ಧಿ ನಡೆಶುದ್ಧಿಗಳೆರಡು
ಒಡನಾಟ ಶುದ್ಧಿಯ ತೂಲಿಕೆಗಳೆನಿಪವು (455)

ಈ ಕುರಳು 'ದುಷ್ಟರ ಒಡನಾಟ ಸೇರದಿರುವುದು' ಎಂಬ ಅಧ್ಯಾಯದಲ್ಲಿ ಬರುತ್ತದೆ.

**'ಸಿರಿ ಕೂಡಿಸುವ ಬಗೆ' ಎಂಬ ಅಧ್ಯಾಯದಲ್ಲಿ ವಳ್ಳುವರು ಹೇಳುತ್ತಾರೆ:**

**ಕರುಣೆ ಪ್ರೀತಿಗಳ ಮಾರ್ಗದಲಿ ಬರದ ಸಿರಿಯುನು**
**ಅಪ್ಪಿಕೊಳ್ಳದದನು ದೂರವಿಡಬೇಕು** (755)

'ನಡು ನೆಲೆ ನೇರ್ಮೆ' ಎಂಬ ಅಧ್ಯಾಯದಲ್ಲಿ ವಳ್ಳುವರು ನಿಷ್ಪಕ್ಷಪಾತದ ನಿಲುವನ್ನು ಕುರಿತು ಹೀಗೆ ನುಡಿಯುವರು:

ನಡುನೆಲೆ ನೇರ್ಮೆಯುಳ್ಳವನ ಸಿರಿಯು
ಅಳಿಯದವನ ಕುಲಜರಿಗಾಧಾರವೆನಿಪುದು (112)



# 10. ವಿಶ್ವಸಸ್ಯಾಹಾರಿ ಕಾಂಗ್ರೆಸ್ಸಿನಲ್ಲಿ ವಳ್ಳುವರು

ಹಾಲೆಂಡಿನಲ್ಲಿ ಪ್ರಧಾನ ಕಛೇರಿ ಹೊಂದಿರುವ ವಿಶ್ವ ಸಸ್ಯಾಹಾರಿ ಕಾಂಗ್ರೆಸ್ ಭಾರತಕ್ಕೆ ಭೇಟಿ ನೀಡಲು ತನ್ನ ಧ್ಯೇಯ ಪ್ರಚಾರಕರ ಸೌಹಾರ್ದ ಮಂಡಲಿಯೊಂದನ್ನು 1961ರಲ್ಲಿ ಕಳುಹಿಸಿತು. ಈ ಪ್ರಚಾರಕರ ಮಂಡಲಿಯಲ್ಲಿ ಆಕ್ಸ್‌ಫರ್ಡ್ ಪಂಡಿತರು, ಫ್ರೆಂಚ್ ವಿದ್ವಾಂಸರು, ಡಚ್ ಮತ್ತು ಜರ್ಮನ್ ಮೇಧಾವಿಗಳು ಇದ್ದರು. ಇವರೆಲ್ಲರೂ ಸಸ್ಯಾಹಾರದಲ್ಲಿ ಕಡುನಿಷ್ಠೆಯುಳ್ಳವರಾಗಿದ್ದು ಸಸ್ಯಾಹಾರದ ತವರುಮನೆಯೆನಿಸಿದ ಭಾರತದಿಂದ ಸ್ಫೂರ್ತಿ ಪಡೆಯುವ ಉದ್ದೇಶದಿಂದ ಭಾರತ ಸಂದರ್ಶನಕ್ಕೆ ಬಂದಿದ್ದರು. ಭಾರತದ ಹಲವು ಸ್ಥಳಗಳನ್ನು ಸಂದರ್ಶಿಸಿದ ನಂತರ ಅವರುಗಳು ಕೊಯಮತ್ತೂರಿಗೆ ಬಂದು ಅಲ್ಲಿ ಒಂದು ಬಹಿರಂಗ ಸಭೆಯನ್ನು ಕರೆದರು. ಈ ಸಭೆಯ ಅಧ್ಯಕ್ಷತೆಯನ್ನು ವಹಿಸಿದ ಪ್ರಸ್ತುತ ಪುಸ್ತಕದ ಲೇಖಕರು ಸಸ್ಯಾಹಾರದ ಮೂಲಚಿಂತನೆಯನ್ನು ವಿವರಿಸುವ ಕುರಳೊಂದನ್ನು ಉದಾಹರಿಸಿದರು. ಸಮಾರಂಭದ ಕೊನೆಯಲ್ಲಿ ಸಸ್ಯಾಹಾರಿ ಕಾಂಗ್ರೆಸ್ಸಿನ ಐರೋಪ್ಯ ಪಂಡಿತ ಪ್ರತಿನಿಧಿಗಳು ವೇದಿಕೆಗೆ ನುಗ್ಗಿಬಂದು ಹೀಗೆ ಘೋಷಿಸಿದರು:

"ಭಾರತದಲ್ಲಿ ನಾವು ನಡೆಸಿದ ಸಭೆಗಳಲ್ಲಿ ಇದು 151ನೆಯದು. ಪ್ರತಿಯೊಂದು ಸಭೆಗೂ ಭಾರತದ ಸಸ್ಯಾಹಾರಿ ಸದಸ್ಯರೊಬ್ಬರು ನಿಯಮದ ಪ್ರಕಾರ ಅಧ್ಯಕ್ಷತೆ ವಹಿಸುತ್ತಿದ್ದರು. ಆದರೆ ಅವರಲ್ಲಿ ಯಾರೂ ನಮ್ಮ ಮೇಲೆ ಪ್ರಭಾವ ಬೀರಲಿಲ್ಲ. ಅದಕ್ಕೆ ಪ್ರತಿಯಾಗಿ ನಿರಾಶಾವಾದಿಗಳಂತೆ ಮಾತನಾಡುತ್ತ ಭಾರತದಲ್ಲಿ ಸಸ್ಯಾಹಾರ ಸೇವನೆಯ ಭವಿಷ್ಯ ಮಸುಕಾಗುತ್ತಿದೆ ಎಂದೇ ಹೇಳುತ್ತಿದ್ದರು. ಆದರೆ ನೀವು ಉದಾಹರಣೆಯಾಗಿ ನೀಡಿದ ಕುರಳು ನಮ್ಮ ಸಸ್ಯಾಹಾರಿ ಧ್ಯೇಯದ ಮೇಲೆ ಹೊಸಬೆಳಕು ಚೆಲ್ಲುತ್ತಿದೆ ಮಾತ್ರವಲ್ಲ ನಾವು ಅದಕ್ಕೆ ಬದ್ಧರಾಗಿರುವಂತೆ ನಮಗೆ ಚೈತನ್ಯ ನೀಡುತ್ತಿದೆ." ಈ ಐರೋಪ್ಯ ಸಂದರ್ಶಕರನ್ನು ಆಕರ್ಷಿಸಿದ ಕುರಳು ಅಹಿಂಸೆಯನ್ನು ಕುರಿತದ್ದು.

ಸಾಮಾನ್ಯವಾಗಿ ಸಸ್ಯಾಹಾರದ ಸಾಧಕಬಾಧಕಗಳನ್ನು ಕುರಿತು ಚರ್ಚಿಸುವಾಗ ಆರ್ಥಿಕ ಆರೋಗ್ಯ, ವೈದ್ಯಕೀಯ ಮತ್ತು ಸಾಂಸ್ಕೃತಿಕ ದೃಷ್ಟಿಗಳಿಂದ ಪ್ರಚಾರ ಮಾಡಲಾಗುವುದು. ಆದರೆ ವಳ್ಳುವರು ಈ ಪ್ರಶ್ನೆಯ ಮೂಲಕ್ಕೇ ಹೋಗಿ "ನಮ್ಮ ಹೃದಯ ಮನಸ್ಸುಗಳಿಂದ ಹಿಂಸೆಯನ್ನು ಕಿತ್ತೊಗೆಯುವ ಹೊರತು ನಮ್ಮ ಸಹಜೀವಿಗಳಲ್ಲಿ ದಯೆ ಅನುಕಂಪೆಯನ್ನು ತೋರಿಸುವುದು ಸಾಧ್ಯವಿಲ್ಲ" ಎಂದು

ಹೇಳಿರುತ್ತಾರೆ. ಹಿಂಸೆಯು ಜೀವಿಗಳ ಐಕ್ಯವನ್ನು ಒಡೆಯುತ್ತದೆ. ಬದುಕಿನ ಬಗೆಗೆ ಇರುವ ಸದ್ಭಾವನೆಯನ್ನು ತಲೆಕೆಳಗು ಮಾಡುತ್ತದೆ. ಇವಿಲ್ಲದೆ ಲೋಕದಲ್ಲಿ ಶಾಂತಿ ನೆಲೆಸಲು ಸಾಧ್ಯವಿಲ್ಲ. ಆದ್ದರಿಂದ, ಜೀವಿಗಳ ಬಗ್ಗೆ ಇರುವ ಎಲ್ಲ ಅನಾದರಗಳನ್ನು ತೊರೆಯುವುದೇ ಸದ್ಗುಣವೆಂದು ವಿಶಾಲಾರ್ಥದಲ್ಲಿ ಸೂತ್ರಪ್ರಾಯವಾಗಿ ಹೇಳಬಹುದು. ಮನುಷ್ಯನು ಅಹಿಂಸೆಯನ್ನು ಯಾಂತ್ರಿಕವಾಗಿಯಲ್ಲದೆ, ಎಲ್ಲ ಜೀವಿಗಳ ಮೇಲಿನ ಪ್ರಾಮಾಣಿಕ ಗೌರವಾದರಗಳಿಂದ ಪಾಲಿಸಿದರೆ ಅವನು ಉತ್ತಮೋತ್ತಮ ಸದ್ಗುಣವನ್ನು ಆಚರಿಸಿದಂತಾಗುತ್ತದೆ. ಆದರೆ ಮನುಷ್ಯನು ಹಿಂಸಾಕೃತ್ಯಕ್ಕೆ ತೊಡಗಿದ್ದೇ ಆದರೆ ಅದಕ್ಕೆ ಮನುಷ್ಯ, ಪಕ್ಷಿ ಅಥವಾ ಯಾವುದೇ ಪ್ರಾಣಿ ಗುರಿಯಾಗಿರಲಿ, ಅವನು ಜೀವಿಯ ಬಗ್ಗೆ ಉಪೇಕ್ಷೆ ತೋರಿಸಿದಂತಾಗುವುದಲ್ಲದೆ ಕಳ್ಳತನ, ದರೋಡೆ, ಅತ್ಯಾಚಾರ ಮತ್ತು ಕೊಲೆಗಳೇ ಮೊದಲಾದ ಎಲ್ಲ ಅವಗುಣಗಳಿಗೂ ಅದು ಆಧಾರವಾಗುವುದು. ಈ ಅಭಿಪ್ರಾಯವನ್ನು ವಳ್ಳುವರು 321ನೆಯ ಕುರಳಿನಲ್ಲಿ ಬಹುಸಾರವತ್ತಾಗಿ ಹೇಳಿರುತ್ತಾರೆ. ಅದನ್ನಿಲ್ಲಿ ಹೀಗೆ ಅನುವಾದಿಸಬಹುದು,

ಅರಗೆಲಸ ಯಾವುದೆನೆ ಕೊಲದಿರುವುದಂ
ಕೊಲುವುದರಿಂ ಪರಪಾಪ ಕರ್ಮಗಳು
ಹುಟ್ಟಿ ಬೆಳೆಯುವುವು (321)

ವಿಶ್ವ ಸಸ್ಯಾಹಾರಿ ಕಾಂಗ್ರೆಸ್‌ನ ಸದಸ್ಯ ಪ್ರತಿನಿಧಿಗಳು ಕೊಯಮತ್ತೂರನ್ನು ಬಿಟ್ಟು ಹೋಗುವಾಗ ತಾವು ಕೇಳಿದ ವಳ್ಳುವರ ವಾಣಿ, ಸಸ್ಯಾಹಾರ ಉದ್ದೇಶಗಳಿಗೆ ಹೊಸ ಆಯಾಮ ನೀಡಿರುವುದರಿಂದ ತಮ್ಮ ಭಾರತ ಪ್ರವಾಸವು ಫಲಪ್ರದವಾಯಿತೆಂದು ಹೇಳಿದರು.



# 11. ಮಾನವನ ವಿಕಾಸಕ್ಕೆ ವಳ್ಳುವರು ರೂಪಿಸಿದ ನೀಲಿನಕ್ಷೆ

ಮಾನವನ ವಿಕಾಸಕ್ಕೆ ವಳ್ಳುವರು ಮನೋಹರವಾದ ನೀಲಿನಕ್ಷೆಯೊಂದನ್ನು ತಯಾರಿಸಿದ್ದಾರೆ. ಸಾಮಾನ್ಯ ಗೃಹಸ್ಥನೊಬ್ಬನು ಸಾಧಾರಣವಾಗಿ ಸ್ವಾರ್ಥಿಯೂ ಸಂಕುಚಿತ ಸ್ವಭಾವ ಮನೋಧರ್ಮದವನೂ ಆಗಿರುತ್ತಾನೆಂದು ಅವರಿಗೆ ಗೊತ್ತು. ಆದ್ದರಿಂದ ಅವರು ಸಾಮಾನ್ಯ ಮಾನವನ ಮುಂದೆ ಸಾಧಿಸಲು ತಕ್ಕುದಾದ ಒಂದು ಆದರ್ಶವನ್ನು ಆಕರ್ಷಕವಾಗುವಂತೆ ಇಡಬೇಕಾಗಿತ್ತು. ಅವರು ಸಾಮಾನ್ಯನ ಮುಂದೆ ಕೀರ್ತಿಯ ಆದರ್ಶನವನ್ನಿಟ್ಟು ಗೃಹಸ್ಥನು ಯಾವ ಸದ್ಗುಣಗಳನ್ನು ಆಚರಿಸುವುದರಿಂದ ಕೀರ್ತಿಯನ್ನು ಸಂಪಾದಿಸಬಹುದೋ ಅಂಥವನ್ನು ವಿಧಿಸುತ್ತಾರೆ.

ಗೃಹಸ್ಥನು ಕೀರ್ತಿಸಾಧಕನಾಗುವ ವೇಳೆಗೆ ಅವನು ಪಾಲಿಸಿದ ಧರ್ಮಮಾರ್ಗ ದಿಂದ ಅವನಲ್ಲಿರುವ ಸ್ವಾರ್ಥವು ತಗ್ಗಿ, ಕೀರ್ತಿಗಿಂತಲೂ ಉನ್ನತವಾದ ಆದರ್ಶ ವನ್ನು ಸಾಧಿಸಲು ಅರ್ಹನಾಗುವನು. ಈ ಹಂತದಲ್ಲಿ ವಳ್ಳುವರು ಕೀರ್ತಿಗಿಂತಲೂ ಉನ್ನತವಾದ ಹಿರಿಯ ಆದರ್ಶವನ್ನು ಅವನ ಮುಂದಿಡುತ್ತಾರೆ. ಅವನು ಅಂತರಂಗ ದಲ್ಲಿ ನಿರಂತರ ಸುಖಿಯಾಗಿ ಶಾಂತಿಯನ್ನು ಪಡೆಯುವುದನ್ನು ಅವರು ಬಯಸು ತ್ತಾರೆ. ಈ ಉದ್ದೇಶದಿಂದ ಕೀರ್ತಿಮಂತನೆನಿಸಿದ ಗೃಹಸ್ಥನು ಚಿಂತಕನಾಗಿ, ಧ್ಯಾನ ಶೀಲನಾಗಿ, ತ್ಯಾಗಿಯಾಗಿ ಸರ್ವಸಂಗ ತ್ಯಾಜ್ಯ ಮನೋಭಾವವುಳ್ಳವನಾದರೆ ಅವನು ಶಾಶ್ವತ ಆನಂದದಲ್ಲಿರುವನೆಂದು ಅವರು ಆಶಿಸುತ್ತಾರೆ. ಈ ಆದರ್ಶವನ್ನು ಸಾಧಿ ಸಿದ ನಂತರ ಸಮುದಾಯದ ಸದಸ್ಯನಾಗಿ, ರಾಷ್ಟ್ರದ ಪ್ರಜೆಯಾಗಿ, ವಿಶ್ವಮಾನವ ನಾಗಿ, ಮಹತ್ವದ ಹಾಗೂ ಫಲಪ್ರದ ಪಾತ್ರವನ್ನು ವಹಿಸಲು ಅವನು ಅರ್ಹವ್ಯಕ್ತಿ ಯೆನಿಸುತ್ತಾನೆ. ಈ ಹಂತದಲ್ಲಿ ವಳ್ಳುವರು ಸನ್ಯಾಸಧರ್ಮ ಅಥವಾ ಮಹಾ ಮಾನವನ ಆದರ್ಶವನ್ನು ಗಮನಕ್ಕೆ ತಂದು ಕೆಲವು ಉದಾತ್ತ ಗುಣಗಳನ್ನು ಪರಿ ಪಾಲಿಸುವುದರ ಮೂಲಕ, ಆದರ್ಶಸಾಧನೆಗೆ ಕರೆ ನೀಡುತ್ತಾರೆ,

ಮಾನಸ ಚಿಕಿತ್ಸೆಯ ಚತುರೋಪಾಯಗಳಿಂದ ವಳ್ಳುವರು ಹೇಗೆ ನಮ್ಮನ್ನು ಕೆಳಹಂತದಿಂದ ಮೇಲಿನ ಹಂತಕ್ಕೆ ಸಜ್ಜನನಾಗುವ (ಶಾನ್ರೊರ್) ಗುರಿಯನ್ನು ಸಾಧಿಸುವವರೆಗೆ ಕರುಣೆಯಿಂದ ಕೈಹಿಡಿದು ನಡೆಸುತ್ತ ಮನವೊಲಿಸಿಕೊಳ್ಳುತ್ತಾ ರೆಂಬುದನ್ನು ಅಭ್ಯಾಸ ಮಾಡುವುದೆ ನಮ್ಮ ಆತ್ಮೋನ್ನತಿಗೆ ಕಾರಣವಾಗಬಲ್ಲುದು.

"ಶಾನ್ರೋರ್" (ಸಜ್ಜನ) ಎಂಬ ತಮಿಳು ಶಬ್ದವನ್ನು ಇಂಗ್ಲಿಷಿಗೆ ಅನುವಾದಿಸುವುದು ಕಷ್ಟ; ಏಕೆಂದರೆ ಸಜ್ಜನನು ಹಲವು ರೀತಿಗಳಲ್ಲಿ ವಿಭಿನ್ನವಾದರು ಉನ್ನತ ಗುಣಗಳನ್ನು ಪಡೆದಿರುವನು. ತಿರುವಳ್ಳುವರ ಪ್ರಕಾರ "ಕಲ್ಬು" ಎಂದರೆ ಸಜ್ಜನನ ಸದ್ಗುಣವು ಐದು ವಿಶಿಷ್ಟ ಗುಣಗಳನ್ನು ಒಳಗೊಂಡಿರುತ್ತದೆ. ಅವು ಯಾವುವೆಂದರೆ ವಿಶ್ವಪ್ರೇಮ, ಸೂಕ್ಷ್ಮ ಸಂವೇದನೆ, ಪರೋಪಕಾರ, ದಯೆ ಮತ್ತು ಸತ್ಯಸಂಧತೆಗಳು (983).

ತಿರುವಳ್ಳುವರ್ ಕಲ್ಪಿಸಿದ ಸಜ್ಜನ (ಶಾನ್ರೋರ್) ರಲ್ಲಿ ಇರಬೇಕಾದ ಮುಖ್ಯ ಅರ್ಹತೆಗಳೇನು? ಅವನು ತನ್ನ ಹಗೆಯನ್ನು ಪ್ರೀತಿಯಿಂದ ನೋಡುವ ಪ್ರೇಮದ ಮೂರ್ತಿಯಾಗಿರಬೇಕು. 987ನೆಯ ಕುರಳಿನಲ್ಲಿ ವಳ್ಳುವರು ಹೀಗೆ ಪ್ರಶ್ನಿಸುತ್ತಾರೆ:

ಅಹಿತವನು ಬಗೆವರೊಳು ಹಿತವನೆಗ್ಗೈವ
ಗುಣವೊಂದಿಲ್ಲವಾದರೆ ಸಜ್ಜನಿಕೆಯು ಫಲವೇನು ? (987)

"ಒಂದು ಕೆನ್ನೆಗೆ ಹೊಡೆದರೆ ಮತ್ತೊಂದು ಕೆನ್ನೆ ತೋರಿಸು" ಎಂಬ ತತ್ವಕ್ಕೂ ಮಿಗಿಲಾದುದು ಈ ಮಾತು. ಸಜ್ಜನರಾದವರು ನೇರ್ಮೆಯ ದೃಷ್ಟಿಯುಳ್ಳವರು. ಆದ್ದರಿಂದ ತಮ್ಮ ಆದರ್ಶಗಳನ್ನು ಪಾಲಿಸಲು ಅವರು ಅಚಲನಿರ್ಧಾರವುಳ್ಳವರು ಅವರ ಸುತ್ತ ಅಂತಿಮ ಪ್ರಳಯವೇ ಸುಳಿಗಟ್ಟಿದರೂ ಸಜ್ಜನರು ವಿಚಲಿತರಾಗದೆ ನೇರ್ಮೆಯಿಂದ ನಿಲ್ಲುತ್ತಾರೆ (989).

ಸಜ್ಜನರ ನೈತಿಕ ಬಲದಿಂದಲೆ ಭೂಮಿಯು ತನ್ನ ಭಾರವನ್ನು ತಾಳಿಕೊಂಡು ನಿಂತಿದೆ ಎಂಬುದು ತಿರುವಳ್ಳುವರ ಮತ.

ಸಜ್ಜನರ ಸದ್ಗುಣಗಳು ಕುಂದೆ ಭೂಮಿ
ತನ್ನಧಿಕ ಭಾರವನು ಭರಿಸಿ ನಿಲಲಾರದು (990)

ಸಜ್ಜನರು ಅಹಂಕಾರದ ಹುಡುಗಾಟಿಕೆಗಳಿಂದ ಚಿತ್ತಚಂಚಲರಾಗುವುದಿಲ್ಲ. ವಾಸ್ತವಿಕವಾಗಿ ಅವರು "ನಾನು", "ನನ್ನದು" ಎಂಬ ಭ್ರಮೆಯನ್ನು ತೊಡೆದು ಹಾಕಿ ನಿರಹಂಕಾರದ ಸ್ಥಿತಿಯನ್ನು ಸಾಧಿಸುತ್ತಾರೆ. ಆದ್ದರಿಂದ ಅವರು ತಮಗಿಂತಲೂ (ಕಡಮೆಯು) ಕಡಮೆಯಾದವರಿಂದಲೂ ಸೋಲನ್ನು ಒಪ್ಪಿಕೊಳ್ಳುವಂಥ ಉದಾತ್ತ ಚಿತ್ತರು (986).

ಬೇರೊಂದು ಕಡೆ ಹೇಳಿರುವಂತೆ ಪ್ರತಿಯೊಬ್ಬ ಮನುಷ್ಯನೂ ಸಜ್ಜನರ ಪಟ್ಟಕ್ಕೇರುವುದು ತನ್ನ ಕರ್ತವ್ಯವೆಂದು ಭಾವಿಸುವಷ್ಟು ಸಂವೇದನಾಶೀಲನಾಗಿರ

ಬೇಕು. ಪ್ರತಿಯೊಬ್ಬ ಸಜ್ಜನನೂ ಅವನಿಂದ ಕಾಲ ದೇಶಗಳು ನಿರೀಕ್ಷಿಸುವಂತೆ ಎಲ್ಲ ಸತ್ಕಾರ್ಯಗಳನ್ನೂ ಮಾಡುವುದು ಅವನ ಕರ್ತವ್ಯವಾಗಬೇಕೆಂದು ತಿರುವಳ್ಳುವರು ಭಾವಿಸುತ್ತಾರೆ.

ಸಜ್ಜನನೆನಿಸಿಕೊಳ್ಳುವ ಮೊದಲು ಪ್ರತಿಯೊಬ್ಬ ವ್ಯಕ್ತಿಯೂ ಪೂರ್ವಭಾವಿಯಾಗಿ ತರಬೇತಿಯನ್ನು ಪಡೆಯಬೇಕು. ಮೊದಲು ಆತನು ಗೃಹಸ್ಥನಾಗಿದ್ದು ಅನಂತರ ನಿಸ್ವಾರ್ಥಿಯಾದ ವಿರಾಗಿಯಾಗಬೇಕು.

ತಿರುವಳ್ಳುವರ ಪ್ರಕಾರ ಗೃಹಸ್ಥನು ಅನುಸರಿಸಬೇಕಾದ ಧರ್ಮವಾವುದು? ಧರ್ಮದ ವಿಶಾಲವಾದ ನಿಸ್ಸಂದಿಗ್ಧವೆನಿಸಿದ ಲಕ್ಷಣವನ್ನು ಅವರಿಲ್ಲಿ ಕೊಟ್ಟಿದ್ದಾರೆ :

ಮನದಲಿ ನಿರ್ಮಲನಾಗುವುದದೆ ಧರ್ಮ
ಮತ್ತೆಲ್ಲ ಬರಿಯ ಆಬ್ಬರದ ಕರ್ಮ (33)

ಮನಸ್ಸನ್ನು ನಿರ್ಮಲವಾಗಿಡುವುದು ಹೇಗೆ ? ಅದನ್ನು 35ನೆಯ ಕುರಳಿನಲ್ಲಿ ಹೇಳುತ್ತಾರೆ :

ಅಸೂಯೆ, ಅತಿಯಾಸೆ, ಕೋಪ, ಕೆಡುನುಡಿಗಳೆಂಬೀ
ನಾಲ್ಕನು ಬಿಡುವುದೆ ಧರ್ಮ (35)

ದುರ್ಗುಣಗಳನ್ನು ತೊಡೆದು ಹಾಕುವುದು ದುಸ್ಸಾಧ್ಯವೇ ಸರಿ ! ಆದರೆ ಅವುಗಳನ್ನು ನಿರ್ಮೂಲ ಮಾಡದೆ ಸುಖ-ಕೀರ್ತಿಗಳನ್ನು ಪಡೆಯುವುದು ಸಾಧ್ಯವಿಲ್ಲವೆಂದು ತಿರುವಳ್ಳುವರ್ ಹೇಳುತ್ತಾರೆ (39).

ಗೃಹಸ್ಥನಾದ ವ್ಯಕ್ತಿಯು ದಾಂಪತ್ಯ ಜೀವನವನ್ನು ಕುರಿತು ಪ್ರಸ್ತಾಪಿಸುತ್ತ ವಳ್ಳುವರು ಅದು ಪ್ರೀತಿ ಸದ್ಗುಣಗಳಿಂದ ಮೇಲ್ಮೆಯನ್ನು ಪಡೆದರೆ ಉನ್ನತವೆನ್ನಿಸಿ ಸಾರ್ಥಕತೆಯನ್ನು ಪಡೆಯುತ್ತದೆ-ಎನ್ನುತ್ತಾರೆ (45).

ವಳ್ಳುವರು ಕೆಲವು ಗುರುತರವಾದ ಕರ್ತವ್ಯಗಳನ್ನು ಗೃಹಸ್ಥನಾದವನು ಪಾಲಿಸಬೇಕೆಂದು ಅಡಿಗಡಿಗೆ ಹೇಳುವಾಗ, ಆ ಕರ್ತವ್ಯಗಳ ಬಗ್ಗೆ ಅವನು ಆಸಕ್ತಿ ತಳೆಯುವಂತೆ ಮಾಡಲು ಅವರು ಆಗಾಗ ಇಂಥ ವಿಚಾರಗಳನ್ನು ಮುಂದಿಡುತ್ತಾರೆ.

ಭೂಮಿಯಲಿ ಬಾಳುವ ರೀತಿಯಲಿ ಬಾಳ್ವವನು
ಬಾನೊಳು ದೇವತೆಗಳ ಮಧ್ಯದಲಿ ಎಡೆಪಡೆವನು (50)

ಗೃಹಸ್ಥನಿಗೆ ಸದ್ಗುಣಿಯಾದ ಹೆಂಡತಿ ದೊರಕದಿದ್ದರೆ, ಅವನ ಕರ್ತವ್ಯಗಳೆಲ್ಲ ವಿಫಲಗೊಳ್ಳುತ್ತವೆಯೆನ್ನುತ್ತಾರೆ ವಳ್ಳುವರು. ಪತ್ನಿಯನ್ನು ಬಾಳ ಸಂಗಾತಿಯೆಂದು ವರ್ಣಿಸಿದ್ದಾರೆ "ಬಾಳ ಸಂಗಾತಿಯ ಒಳಿತು" ಎಂಬ ಅಧ್ಯಾಯದಲ್ಲಿ ಎಲ್ಲ ಸದ್ಗುಣಗಳಿಗಿಂತಲೂ ಉನ್ನತವಾದುದು ಹೆಣ್ಣಿನ ಸುಶೀಲಗುಣವೆಂದು ಅವರು ಭಾವಿಸುತ್ತಾರೆ:

ಹೆಣ್ಣು ಸುಚರಿತೆಯೂ ಸುಶೀಲೆಯೂ ಆದೊಡೆ
ಅವಳಿಗು ಹಿರಿದೆನಿಪ ಶಕ್ತಿ ಯಾವುದಿದೆ? (54)

ದೈವಗಳಿಗೆರಗದೆ ಮುಂಜಾನೆ ಪತಿಯ ಪಾದ
ಗಳಿಗೆರಗಿ ಏಳುವಳು ಹುಯ್ಯೆಂದೊಡನೆ
ಮಳೆ ಸುರಿಯುವುದು (55)

ಎಂದು ಪತಿವ್ರತೆಯಾದ ಹೆಣ್ಣಿನ ಅದ್ಭುತ ಶಕ್ತಿಯನ್ನು ಕೊಂಡಾಡಿದ್ದಾರೆ. 57ನೆಯ ಕುರಳಿನಲ್ಲಿ ಹೇಳುತ್ತಾರೆ:

ಕಾವಲಿಟ್ಟವಳ ಶೀಲ ರಕ್ಷಿಪುದೇಕೆ?
ಶೀಲಸಂಪನ್ನತೆಯವಳ ಕಾವಲು ಪಡೆಯು (57)

ಹೆಂಡತಿಯು ಮನೆಯೊಡತಿ, ದಾಂಪತ್ಯಜೀವನದಲ್ಲಿ ಅವಳ ಪಾತ್ರ ಉಚ್ಚತರವಾದುದು. ಆದರಿಂದಲೆ 53ನೆಯ ಕುರಳಿನಲ್ಲಿ ಅವರು ಪ್ರಶ್ನೆ ಹಾಕುತ್ತಾರೆ:

ಮನೆಯೊಡತಿ ಸದ್ಗುಣಭರಿತೆಯಾದೊಡೆ
ಇಲ್ಲವಾದುದೇನು ಬಾಳಿನಲಿ?
ಗುಣಹೀನೆಯಾದೊಡವಳು ಬಾಳಿನಲಿ
ಇರುವುದಾದರೂ ಏನು? (53)

ಮಹೋನ್ನತವಾದ ದಾಂಪತ್ಯ ಜೀವನವು ಸತಿಪತಿಯರ ನಡುವೆ ಇರುವ ಅಡೆತಡೆಗಳನ್ನು ತೊಡೆದು ಹಾಕಿ ಸ್ವಾರ್ಥತ್ಯಾಗ ಮತ್ತು ನಿಸ್ವಾರ್ಥ ಪ್ರೇಮಗಳ ಬಗ್ಗೆ ಅವರಿಗೆ ಶಿಕ್ಷಣ ನೀಡುತ್ತದೆ. ಸತಿಪತಿಯರ ಬದುಕಿನಲ್ಲಿ ಮಕ್ಕಳ ಪ್ರವೇಶವಾದ ಬಳಿಕ ಗೃಹಧರ್ಮದ ಪರಿಧಿಯು ವಿಸ್ತಾರಗೊಂಡು ಆ ಮೂಲಕ ಸ್ವಾರ್ಥರಹಿತ ಜೀವನದ ಕ್ಷೇತ್ರವು ವಿಕಾಸವಾಗುತ್ತದೆ. ಒಬ್ಬ ಅಪರಿಚಿತ ಮಗುವೊಂದು ನಿಮ್ಮ ಕಾಪಿ ಬಟ್ಟಲಿನಲ್ಲಿ ತನ್ನ ಕೊಳಕಾದ ಕೈಗಳನ್ನು ಅದ್ದಿದರೆ ನೀವದಕ್ಕೆ ಹೇಸು

ತ್ತೀರಿ. ಆದರೆ ಆ ಬೆರಳುಗಳು ನಿಮ್ಮ ಮಕ್ಕಳದ್ದೇ ಆದರೆ ಆ ಕಲಕಿದ ಕಾಫಿಗೆ ಮತ್ತಷ್ಟು ರುಚಿ ಹೆಚ್ಚಾಗುತ್ತದೆ. ಆದ್ದರಿಂದ ವಳ್ಳುವರು ಸರಿಯಾಗಿಯೇ ಹೇಳಿದ್ದಾರೆ:

ತಮ್ಮ ಮಕ್ಕಳು ಕಿರುಕೈಯುಲಿ ಚೆಲ್ಲಾಡಿದ ಕೂಳು
ಹೆತ್ತವರಿಗಮ್ಮತಕು ಮಿಗಿಲಾದ ಸವಿಯುಣಿಸು (64)

ಅವರಿಗೆ ಮಕ್ಕಳ ತೊದಲು ಮಾತು ಸಂಗೀತವಿದ್ದಂತೆ. ಅದು ಕೊಳಲಿಗಿಂತಲೂ ತಂತೀವಾದ್ಯಕ್ಕಿಂತಲೂ ಮಿಗಿಲಾದದು. ಯಾರು ಮಕ್ಕಳ ಮುದ್ದಾದ ತೊದಲುನುಡಿಯನ್ನು ಕೇಳರಿಯುದವರೋ ಅವರು "ಕೊಳಲು ಇನಿದು, ತಂತೀವಾದ್ಯ ಇನಿದು" ಎಂದು ಹೇಳುತ್ತಾರೆ. (66)

ಇಂಥ ಪ್ರೇಮ ಮತ್ತು ಸಮರ್ಪಣೆಗಳ ಪರಿಸರದಲ್ಲಿ ಮಕ್ಕಳು ಕುಟುಂಬದಲ್ಲಿ ಬೆಳೆದು ದೊಡ್ಡವರಾಗುತ್ತಾರೆ.

ಇನ್ನು, ಮಗುವನ್ನು ಬೆಳೆಸುವ ತಂದೆಯ ಹೊಣೆಯನ್ನು ವಿವರಿಸುತ್ತ ವಳ್ಳುವರು ಹೀಗೆ ನಿರೂಪಿಸುತ್ತಾರೆ:

ತಂದೆ ಮಗನಿಗೆ ಮಾಡುವ ಮಹದುಪಕಾರವೆನೆ
ವಿದ್ವಜ್ಜನರ ಸಭೆಯುಲಿ ಎದೆಗೊಟ್ಟು
ಮಾತನಾಡುವ ತೆರದಿ ವಿದ್ಯೆ ಕಲಿಸುವುದು (67)

ಅದೇ ರೀತಿ ಮಗನಾದವನು ತನ್ನ ಕರ್ತವ್ಯಗಳನ್ನು ನಿರ್ವಹಿಸಲು ತಂದೆಗೆ ನೆರವಾಗಬೇಕು. ಸಜ್ಜನನಾಗಿ ಬೆಳೆಯುವ ಆದರ್ಶವನ್ನು ಹೊಂದಿರಬೇಕು.

ತನ್ನ ಮಗ ಕೀರ್ತಿಶಾಲಿ ಎಂದು ಹೆರರಿಂ
ಕೇಳಿ ತಾಯಿ ಪಡೆವ ಆನಂದ, ಜನ್ಮ
ಕೊಟ್ಟಾಗ ಪಡೆದ ಆನಂದಕು ಮಿಗಿಲು (69)

ತಂದೆಯು ತೋರಿದ ಕರುಣೆಗೆ ಪ್ರತಿಯಾಗಿ ಮಗನು ಮಾಡುವ ಮಹದುಪಕಾರವೆಂದರೆ:

ತಂದೆ ಇವನಂ ಪಡೆಯಲದೆಷ್ಟು
ತಪವಂ ಗೈದನೋ (70)

ಎಂದು ಜನರು ಹೇಳುವಂತೆ ನಡೆದುಕೊಳ್ಳಬೇಕು.

ತಂದೆ, ತಾಯಿ ಮತ್ತು ಮಗ–ಇವರುಗಳಲ್ಲಿರಬೇಕಾದ ಪರಸ್ಪರ ವ್ಯಕ್ತಿ ಸಂಬಂಧವನ್ನು ವಳ್ಳುವರು ಸೂಚಿಸಿದ ಮೇಲೆ ಕುಟುಂಬದ ಸದಸ್ಯರನ್ನು ಪೋಷಿಸುವ ಅಭಿಮಾನವು ಸ್ವಾರ್ಥಸಾಧನೆಯಲ್ಲಿ ಬತ್ತಿಹೋಗದೆ ಅದು ವ್ಯಕ್ತಿ, ಕುಟುಂಬ ಮತ್ತು ರಾಷ್ಟ್ರದ ಸೀಮೆಗಳನ್ನೂ ದಾಟಿ ವಿಶ್ವಮಾನ್ಯವಾಗಬೇಕೆಂದು ಅವರು ಬಯಸುತ್ತಾರೆ. 72ನೆಯ ಕುರಳಿನಲ್ಲಿ ಉನ್ನತವಾದ ಮತ್ತು ಶ್ರೇಷ್ಠವಾದ ತ್ಯಾಗ ಕ್ರಿಯಗಳಿಂದ ಸ್ವತಃ ವಿದಿತವಾಗುವ ನೈಜಪ್ರೇಮಕ್ಕೂ ಕಲ್ಲೆದೆಯವರ ಪ್ರೇಮದ ಅಭಾವಕ್ಕೂ ಇರುವ ಅಂತರಗಳನ್ನು ನಿರ್ದೇಶಿಸಿದೆ:

ಪ್ರೀತಿ ಇಲ್ಲದವರು ಎಲ್ಲವೂ ತಮ್ಮದೇ ಎಂದು ತಿಳಿಯುವರು
ಪ್ರೀತಿಯುಳ್ಳವರು ತಮ್ಮೆಲುಬೂ ಪರರದೆಂದಿಣಿಸುವರು (72)

ಪ್ರೀತಿಯ ಮಹತ್ವವನ್ನು ಒತ್ತಿ ಹೇಳಿದ ಮೇಲೆ ವಳ್ಳುವರು ಗೃಹಸ್ಥನಾದವನು ಅತಿಥಿಗಳನ್ನು ಹೇಗೆ ಸತ್ಕರಿಸಬೇಕೆಂದು ಹೇಳುತ್ತಾರೆ. ಎರಡು ಸಾವಿರ ವರ್ಷಗಳ ಹಿಂದೆ, ತಮಿಳು ನಾಡಿನಲ್ಲಿ ಉಪಾಹಾರ ಗೃಹಗಳಾಗಲೀ ವಸತಿಗೃಹಗಳಾಗಲೀ ಇರಲಿಲ್ಲ. ನಾನಾ ವಿಸ್ತೀರ್ಣದ ಹಳ್ಳಿಗಳು ಸಾಕಷ್ಟಿದ್ದುವು. ತೀರ್ಥಯಾತ್ರಾರ್ಥಿಗಳು, ವ್ಯಾಪಾರಿಗಳು, ಸತ್ಯಾನ್ವೇಷಕರಾದ ಪಂಡಿತರು ಮತ್ತು ಕವಿಗಳು–ಕಾಲು ನಡಿಗೆಯಲ್ಲೇ ತಮ್ಮ ದೀರ್ಘ ಪ್ರಯಾಣಗಳನ್ನು ಮಾಡುತ್ತಿದ್ದರು. ನಸುಕು ಕವಿದೊಡನೆಯೇ ತಮ್ಮ ಪ್ರಯಾಣವನ್ನು ನಿಲ್ಲಿಸಿ ಮರುದಿನ ಮುಂಜಾನೆ ತಮ್ಮ ಪ್ರಯಾಣವನ್ನು ಮುಂದುವರಿಸಬೇಕಿತ್ತು. ತಮಿಳುನಾಡಿನ ಹವಾಮಾನ ಹೇಗಿತ್ತೆಂದರೆ ವರ್ಷದಲ್ಲಿ ಎರಡು ಅಥವಾ ಮೂರು ತಿಂಗಳುಗಳನ್ನು ಬಿಟ್ಟರೆ ಉಳಿದೆಲ್ಲ ಮಾಸಗಳಲ್ಲಿ ಯಾರೇ ಆಗಲಿ ಮನೆಗಳ ಹೊರಜಗಲಿಯ ಮೇಲೆ ಯಾವೊಂದು ಬಾಡಿಗೆಯನ್ನೂ ಕೊಡದೆ ಮಲಗಬಹುದಿತ್ತು. ಈ ಹಿನ್ನೆಲೆಯಲ್ಲಿ ವಳ್ಳುವರು ಅತಿಥಿಗಳ ಆದರಾತಿಥ್ಯಗಳಿಗೆ ಕೊಟ್ಟಿರುವ ಪ್ರಾಮುಖ್ಯವನ್ನು ಗ್ರಹಿಸಬೇಕಾಗುತ್ತದೆ. ಅತಿಥಿಗಳು ತಿಳಿದವರೆ ಆಗಿರಲಿ, ಅಪರಿಚಿತರೆ ಆಗಿರಲಿ ಒಮ್ಮೆ ಅವರು ಮನೆಗೆ ಬಂದರೆ ಅವರನ್ನು ಸ್ನೇಹದಿಂದ, ಗೌರವಾದರಗಳಿಂದ ಒಳಗೆ ಕರೆದುಕೊಂಡು ಹೋಗಿ ಉಪಚರಿಸಬೇಕಾಗಿತ್ತು. ಹಾಗೆ ಬಂದವರು ತಿರುಪೆಯೆತ್ತಿ ಜೀವಿಸುವ ಭಿಕ್ಷುಕರಲ್ಲ. ಸಾಮಾನ್ಯವಾಗಿ ಅಂಥವರು ತುಂಬ ಸೂಕ್ಷ್ಮಸಂವೇದನವುಳ್ಳ ಕವಿಗಳು. ಕಲಾವಿದರು ಮತ್ತು ತತ್ವಜ್ಞಾನಿಗಳಾಗಿರುತ್ತಿದ್ದರು. 90ನೆಯ ಕುರಳಲ್ಲಿ ಹೀಗೆ ಹೇಳಿದೆ:

ಅನಿಚ್ಚ ಹೂ ಮೂಸಿದೊಡನೆ ಮುರುಟುವುದು
ಮುಖವರಳಿಸದತ್ತ ತಿರುಗಿಸಿದರೆ ಅತಿಥಿಯು
ಬಾಡಿ ಸೊರಗುವನು (90)

ಸವಿಮಾತು ಜೀವನಚಕ್ರವು ಸರಾಗವಾಗಿ ಚಲಿಸುವಂತೆ ಮಾಡುತ್ತದೆ. ಪರಿಸರವನ್ನು ಸಹಜದೃಷ್ಟಿಶೀಲವಾಗಿಡುತ್ತದೆ. ನಗೆಯಿಲ್ಲದೆ, ಮನವೊಲಿದು ಕೊಡುವ ದಾನಕ್ಕಿಂತ, ಮುಖದಲ್ಲಿ ನಗೆಚೆಲ್ಲಿ ಸವಿಮಾತು ಆಡುವುದು ಹೆಚ್ಚು ಅರ್ಥಪೂರ್ಣವಾಗಿರುತ್ತದೆ (92).

ಸವಿಮಾತುಗಳನ್ನಾಡಿ ಸಮೃದ್ಧಿಯಾದ ಲಾಭ ಪಡೆಯಬಹುದಾದ ಜನರು ಅವ್ಯವಹಾರಿಕವಾಗಿ, ಕಟುನುಡಿಗಳನ್ನಾಡಿ. ನಷ್ಟವನ್ನು ಅನುಭವಿಸುವುದನ್ನು ಕಂಡು ವಳ್ಳುವರು ವಿಸ್ಮಯಪಡುತ್ತಾರೆ.

ಗೃಹಸ್ಥನಾದವನು ರೂಢಿಸಿಕೊಳ್ಳಬೇಕೆಂದು ವಳ್ಳುವರು ಇಚ್ಛಿಸುವ ಮತ್ತೊಂದು ಗುಣವೆಂದರೆ ಉಪಕಾರವನ್ನು ಕೃತಜ್ಞತೆಯಿಂದ ನೆನೆಯುವುದು. ಮಾನವನ ಮನಸ್ಸಿನ ಮೇಲೆ ಕೃತಜ್ಞತೆ ಎಂಥ ಪ್ರಭಾವವನ್ನು ಬೀರಬಲ್ಲುದು ಎನ್ನುವುದನ್ನು ತಿರುವಳ್ಳುವರು ಅರಿತಿದ್ದರು:

ಮಾಡಿದುಪಕಾರವನು ಮರೆವುದು ಒಳಿತಲ್ಲ
ಉಪಕಾರವಲ್ಲದನು ಅಂದೆ ಮರೆವುದು ಲೇಸು (108)

ಬೇರೊಬ್ಬರು ನಮಗೆ ಮಾಡಿದ ಉಪಕಾರವನ್ನು ಕೃತಜ್ಞತೆಯಿಂದ ನೆನೆಯುವುದರಿಂದ ನಾವು ಮಾನಸಿಕ ಹಾಗೂ ದೈಹಿಕವಾದ ಆನಂದಕ್ಕೆ ಭಾಗಿಗಳಾಗುತ್ತೇವೆ. ಬೇರೊಬ್ಬರಿಂದ, ದೈಹಿಕವಾಗಿಯೋ ಮಾನಸಿಕವಾಗಿಯೋ ನಮಗೆ ಆದ ನೋವನ್ನು ನೆನೆಯುವುದರಿಂದ ಅದು ಮನಸ್ಸು ಶರೀರಗಳೆರಡಕ್ಕೂ ಹಿತವಲ್ಲ. ಆದ್ದರಿಂದ ವಳ್ಳುವರು ಹೇಳುತ್ತಾರೆ:

"ಅದನ್ನು ಅಂದೆ ಮರೆವುದೇ ಲೇಸು!"

ನಾವು ಕೆಡುಕಿಗೆ ಹೇಗೆ ಪ್ರತಿಕ್ರಿಯಿಸಬೇಕೆಂಬುದನ್ನು ವಳ್ಳುವರು ಬೋಧಿಸುತ್ತಾರೆ. ಒಬ್ಬನ ವೃತ್ತಿ ಮಾರಕವಾದ ಪರಿಣಾಮವನ್ನು ನಮಗೆ ಉಂಟು ಮಾಡಿದ್ದರೂ ಅವನು ಹಿಂದೆ ನಮಗೆ ಮಾಡಿದ ಯಾವುದಾದರೂ ಉಪಕಾರವನ್ನು ನೆನೆದರೂ ಸಾಕು ಆಘಾತದ ಪರಿಣಾಮವೆಲ್ಲ ಪರಿಹಾರವಾಗುತ್ತದೆ (109.)

ಗೃಹಸ್ಥನು ಅನುಸರಿಸಬೇಕೆಂದು ಹೇಳುವ ಮತ್ತೊಂದು ಗುಣವೆಂದರೆ

ನಿಷ್ಪಕ್ಷಪಾತ. ಎರಡೂ ಕಡೆ ಒಂದೇ ಸಮನಾದ ಭಾರದಿಂದ ಸರಿದೂಗುವ ತಕ್ಕಡಿಯ ಕೋಲಿನಂತೆ, ಯಾವ ಕಡೆಗೂ ಮಣಿಯದಂತೆ ನಿಷ್ಪಕ್ಷಪಾತದಿಂದಿರುವುದು ಸಂಪನ್ನರಾದವರಿಗೆ ಭೂಷಣವೆನ್ನಿಸುತ್ತದೆ. (118)

ಇದೇ ಅನುಕ್ರಮದಲ್ಲಿ ಮುಂದೆ ವಿನಯಪರತೆಯನ್ನು ಕುರಿತು ತಿರುವಳ್ಳುವರು ಹೇಳುತ್ತಾರೆ:

ವಿನಯ ನಮ್ರತೆಗಳಮರರ ನಡುವೆ ಸೇರುವುವು
ಅವಿನಯವು ಕಾರಿರುಳ ಕೂಪದಲಿ ತಳ್ಳುವುದು (121)

ಈ ಭಾವನೆಯು ಹ್ಯಾಜಲಿಟ್ಟನ 'ಸದ್ಗುಣಗಳಲ್ಲೆಲ್ಲ ವಿನಯವು ಅತ್ಯಂತ ಕೀಳಾದದ್ದು' (Humility is the worst of virtues) ಎಂಬ ಹೇಳಿಕೆಗೆ ವಿರುದ್ಧವಾಗಿ ತೋರುತ್ತದೆ. ವಾಸ್ತವಿಕವಾಗಿ ಹ್ಯಾಜಲಿಟನು ವಿನಯ ಗುಣವನ್ನು (Humility) ಅಂಜುಬುರುಕುತನವೆಂದು (Timidity) ತಪ್ಪಾಗಿ ಭಾವಿಸಿರುವಂತೆ ಕಾಣುತ್ತದೆ. ತಾನು ಕಲಿಯುವುದು ಇನ್ನೂ ಬಹಳವಿದೆಂಬೆಂಬ ಅರಿವುಳ್ಳ ವಿದ್ಯಾವಂತನ ಲಕ್ಷಣವೆ ವಿನಯ ಪರತೆ ವಳ್ಳುವರು ಹೇಳುವಂತೆ:

ಅಡಗಿ ನಡೆವುದು ಸಕಲರಿಗೂ ಲೇಸು
ಸಿರಿವಂತರಿಗೆ ಅದು ಸಿರಿಯಷ್ಟೇ ಸೊಬಗು (125)

ವಿನಯ ಗುಣವಿಲ್ಲದ ವ್ಯಕ್ತಿಯು ಒಡನೆಯೇ ಕೋಪಕ್ಕೆ ತುತ್ತಾಗಿ ಅನಗತ್ಯವಾಗಿ ನಾಲಿಗೆಯನ್ನು ಹೊರಳಿಸಿ ದುಃಖಕ್ಕೆ ಈಡಾಗುತ್ತಾನೆ. ಆದ್ದರಿಂದಲೇ ವಳ್ಳುವರು ಹೇಳುತ್ತಾರೆ:

ಕಿಚ್ಚಿನಿಂ ಸುಟ್ಟಪುಣ್ಣು ಒಳಗೊಳಗೆ ಆರುವುದು
ನಾಲಗೆಯ ನುಡಿಗಿಚ್ಚಿನಿಂ ಸುಟ್ಟಪುಣ್ಣು ಆರದೆಂದೆಂದು (129)

ಗೃಹಸ್ಥನು ಒಳ್ಳೆಯ ನಡತೆಯನ್ನು ಬೆಳೆಸಿಕೊಳ್ಳಬೇಕೆಂದು ವಳ್ಳುವರು ಮುಂದೆ ಹೇಳುತ್ತಾರೆ. ಸದಾಚಾರದಿಂದ ಮುಂದೆ ಪರಲೋಕ ಪ್ರಾಪ್ತವಾಗುವುದೆಂದು ಅವರು ಹೇಳುವುದಿಲ್ಲ. ಅವರು ಹೇಳುವುದಿಷ್ಟೆ: ನಡತೆಯು ಸಮಾಜದಲ್ಲಿ ಮೇಲ್ಮೆಯನ್ನು ಗಳಿಸಿಕೊಡುತ್ತದೆ. ಆದ್ದರಿಂದ ಅದನ್ನು ಪ್ರಾಣಕ್ಕಿಂತಲೂ ಅಮೂಲ್ಯವಾದದ್ದೆಂದು ತಿಳಿಯಬೇಕು (131).

137ನೆಯ ಕುರಳಿನಲ್ಲಿ ಅವರು ನುಡಿವುದೇನೆಂದರೆ:

ನಲ್ನಡೆಯಲಿ ನಿಜ ಮೇಲ್ಮೆಯನು ಸಾರುವರು
ಕೀಳ್ನಡೆಯಿಂದೈದುವರು ಹೊಂದಬಾರದ ನಿಂದೆ (137)

ಉತ್ತಮವಾದ ನಡೆ ಹರ್ಷವನು ಬಿತ್ತುವುದು ಎಂದು ವಳ್ಳುವರು ಹೇಳುತ್ತ ಅದನ್ನು ಜೀವನದಲ್ಲಿ ರೂಢಿಸಿಕೊಳ್ಳುವಂತೆ ಪ್ರೇರೇಪಿಸುತ್ತಾರೆ.

ನಲ್ಮೆಗೆ ಬಿತ್ತಾಗುವುದು ನಲ್ನಡೆಯು ಎಂದೆಂದು
ದುಃಖದಲಿ ಕೆಡಹುವುದು ದುರ್ನಡತೆಯು (138)

ಗೃಹಜೀವನದ ಧರ್ಮವನ್ನು ಕೈಗೊಂಡವನು ಬೇರೊಬ್ಬನ ಮಡದಿಗೆ ಆಸೆ ಪಡುವುದು ಸಲ್ಲದೆಂಬುದಕ್ಕೆ ವಳ್ಳುವರು ತುಂಬ ಲಕ್ಷ್ಯ ಕೊಡುತ್ತಾರೆ.

ಧರ್ಮಬಾಹಿರವೆನಿಸಿದವರೊಳು ಪರಸತಿಯು
ಬಯಸಿ ಅಳಿಯಾಸೆಯಿಂ ಪರನ ಮನೆ ಬಾಗಿಲಲಿ
ನಿಂತವನು ಮೂರ್ಖನೆನಿಸಿಪನು (142)

ಪರಸತಿಗೆ ಆಸೆಪಡದಿರುವುದಕ್ಕೆ ಎಷ್ಟೊಂದು ಕೆಚ್ಚಿರಬೇಕೆಂಬುದನ್ನು ವಳ್ಳುವರು ಬಲ್ಲರು. ಒಮ್ಮೆ ಆ ಸ್ಥೈರ್ಯವನ್ನು ಸಾಧಿಸಿದರೆ ಘನತೆ ಗೌರವಗಳು ತಾನಾಗಿಯೇ ಅದನ್ನು ಹಿಂಬಾಲಿಸಿ ಬರುತ್ತವೆಯೆಂಬುದೂ ಅವರಿಗೆ ಗೊತ್ತಿತ್ತು. 148ನೆಯ ಕುರಳಿನಲ್ಲಿ ಅದನ್ನು ಕುರಿತು ಹೇಳಿರುತ್ತಾರೆ:

ಪರವೆಣ್ಣ ಕಡೆಗೆ ನೋಟವನು ಹರಿಸದ ಪೌರುಷವು
ಪರಗುವರಗದು ಧರ್ಮವೊಂದೆ ಅಲ್ತು
ಪರವೋಚ್ಚ ಮರ್ಯಾದೆಯುಹುದು (148)

ಸಹನಶೀಲ ಗುಣದತ್ತ, ಗಮನ ಹರಿಸುತ್ತ ವಳ್ಳುವರು ಗೃಹಸ್ಥನಿಗೆ ಹೇಳುತ್ತಾರೆ:

ತನ್ನ ಅಗೆವರನು ತಾಳಿಕೊಳ್ಳುವ ನೆಲೆವೆಣ್ಣಿನಂತೆ
ತಮ್ಮನಿಂದಿಪರ ತಾಳಿಕೊಳುವುದೆ ಹಿರಿಮೆ (151)

153ನೆಯ ಕುರಳಿನಲ್ಲಿ ಆಸಕ್ತಿಯುತವಾದ ಮತ್ತು ಆಲೋಚನ ಪ್ರೇರಕವಾದ ಒಂದು ನುಡಿಗಟ್ಟನ್ನು ಅವರು ನುಡಿದಿರುತ್ತಾರೆ:

ಅತಿಥಿಯನಾದರಿಸದೆ ಅಟ್ಟುವುದು ಬಡತನದೊಳು
ಕಡುಬಡತನವೆನಿಪುದು
ಮಡೆಯರನು ತಾಳಿಕೊಂಡಿಪುದು ಬಲ್ಮೆಯೊಳು
ಅಧಿಕ ಬಲ್ಮೆಯೆನಿಪುದು (153)

ಆತಿಥ್ಯ ಮತ್ತು ಸಹನೆಗಳು ಪರಸ್ಪರವಾಗಿ ಜೊತೆಗೂಡಿರುವುದನ್ನು ಈ ಕುರಳಲ್ಲಿ ಕಾಣಬಹುದು. ಅವರು ಹೇಳುತ್ತಾರೆ:

ಉಪವಾಸ ವ್ರತ ನೇಮಗಳ ತಾಳಿಕೊಳ್ಳುವರು
ಮೇಲ್ಮೆಪಡೆದವರೆನಿಸಿದರು
ಪರರ ಕೆಡುನುಡಿಗಳ ತಾಳಿಕೊಳ್ಳುವರ
ಹಿಂದೆ ನಿಲ್ಲುವರು (160)

ಅನಂತರ ಗೃಹಸ್ಥನು ಅಸೂಯಾವಿಮುಕ್ತನಾಗಿರಬೇಕೆಂದು ವಳ್ಳುವರು ಮತ್ತೆ ಬೋಧಿಸುತ್ತಾರೆ. ಶೇಕ್ಸ್‌ಪಿಯರ್ ಈ ಅಸೂಯೆಯನ್ನು 'ಹಸುರುಗಣ್ಣಿನ ಕಾಡುಕಪ್ಪೆ' (Green eyed toad) ಎಂದು ಬೊಟ್ಟುಮಾಡಿ ತೋರಿಸುತ್ತಾನೆ.

ಕರುಬುವಗೆ ಬೇರೆ ಹಗೆ ಇಲ್ಲವಾದೊಡೇನು ?
ಅದೆ ಸಾಕು ಕೇಡು ತಪ್ಪದೆ ತರಲು (165)

ಅನ್ಯರ ಆಸ್ತಿಗೆ ಆಸೆಪಡಬಾರದೆಂಬುದು ತಿರುವಳ್ಳುವರು ನೀಡುವ ಮುಂದಿನ ಹಿತವಚನ. ಪ್ರಧಾನಿಯಾಗಿದ್ದ ಗ್ಲಾಡ್‌ಸ್ಟನ್ನರು ಕದಿಯುವ ಚಾಳಿಯಿಂದ (Kleptomania) ತಮ್ಮ ಭವ್ಯ ವ್ಯಕ್ತಿತ್ವಕ್ಕೆ ಹೇಗೆ ಕಳಂಕ ತಂದುಕೊಂಡರೆಂಬು ದನ್ನು ನಾವು ಅರಿತಿದ್ದೇವೆ. ಪರಧನವನ್ನು ಬಯಸಬಾರದೆಂದು ಬೋಧಿಸಿದ ಅನಂತರ ವಳ್ಳುವರು ಇನ್ನೊಬ್ಬರನ್ನು ದೂರುವುದರಿಂದ ದೂರವಾಗಿರಬೇಕೆಂಬ ಗುಣವನ್ನು ಮುಂದಿಡುತ್ತಾರೆ. ಬೆನ್ನ ಹಿಂದೆ ಆಡಿಕೊಳ್ಳುವ ಸ್ವಭಾವವು ವಿಶ್ವಾಸಕ್ಕೆ ವ್ಯತಿರಿಕ್ತವಾದುದು; ಗೆಳೆತನ ಮತ್ತು ಒಗ್ಗಟ್ಟುಗಳನ್ನು ಒಡೆಯುವಂತಹುದು. 187ನೆಯ ಕುರಳು ಸಾರುತ್ತದೆ:

ನಗೆಯಲಿ ಸವಿಮಾತು ಆಡಿ ಕೆಳೆಯಬೆಳೆಸಲರಿಯದವರು
ಹಗೆಮಾತುವೆರಸಿ ಒಡನಾಡಿಗಳ ಒಡೆಯಲೆತ್ನಿಸುವರು (187)

ವಳ್ಳುವರು ಚಾಡಿಕೋರರ ಬಗ್ಗೆ ತಿರಸ್ಕಾರ ವ್ಯಕ್ತಪಡಿಸಿ ಆಶ್ಚರ್ಯ ಪಡುವರು:

ಹುಲು ನುಡಿಗಳಲ್ಲಿ ಪರನಿಂದೆಯಾಡುವವನ ಭಾರವನು
ಧರ್ಮಗುಣದಿಂ ತಾಳಿಕೊಳ್ವುದು ಧರೆಯು (189)

190ನೆಯ ಕುರಳಲ್ಲಿ ಹೀಗೆ ಪ್ರಶ್ನಿಸುತ್ತಾರೆ:

ಪರರ ದೋಷಗಳನರಿತಂತೆ ತನ್ನಯ ದೋಷಗಳನು

ಅರಿಯಬಲ್ಲನಾದೊಡೆ ನೆಲೆಯಾದ ಬಾಳಿಗೆ ಕೇಡೆಂಬುದುಂಟೆ? (190)

ಮುಂದೆ ಗೃಹಸ್ಥನಿಗೆ ವ್ಯರ್ಥಾಲಾಪಗಗಳಲ್ಲಿ, ತೊಡಗದೆ ಕೆಟ್ಟ ಕೆಲಸಗಳನ್ನು ಮಾಡಲೂ ಅಂಜುವಂತೆ ವಳ್ಳುವರು ನಿರ್ದೇಶನ ನೀಡುತ್ತಾರೆ:

ತನಗಿಲ್ಲವೆಂದು ಪರರಿಗೆ ಕೇಡೆಣಿಸದಿರು
ಎಣಿಸಿದೊಡೆ ಬಡತನವು ಬಿಡದೆ ಬಾಧಿಸುವುದು (205)

204ನೆಯ ಕುರಳಲ್ಲಿ ಅವರು ವ್ಯಕ್ತಪಡಿಸುವುದೇನೆಂದರೆ:

ಮರೆತು ಮತ್ತೊಬ್ಬನ ಕೇಡೆಣಿಸದಿರು
ಎಣಿಸೆ ಎಣಿಪುದು ಧರ್ಮವವನ ಕೇಡು (204)

ಎಲ್ಲಕ್ಕೂ ದಯೆ ತೋರಬೇಕೆಂದು ವಳ್ಳುವರು ಬೇರೊಂದು ಅಧ್ಯಾಯದಲ್ಲಿ ಸೂಚಿಸಿರುತ್ತಾರೆ.

ಉಪಕೃತಿಗೆ ಪ್ರತ್ಯುಪಕಾರದ ಹಂಗೇಕೆ? ಈ ಲೋಕವೆಂತು
ಪ್ರತಿಫಲ ನೀಡುವುದು ಮಳೆ ಸುರಿಸುವ ಮೋಡಗಳಿಗೆ? (211)

ದೇವಲೋಕದಲ್ಲಾಗಲಿ, ಮರ್ತ್ಯಲೋಕದಲ್ಲಾಗಲಿ ದಯಾಗುಣವನ್ನು ಮೀರಿಸುವ ಬೇರೊಂದು ಸದ್ಗುಣವಿಲ್ಲವೆಂಬುದೇ ವಳ್ಳುವರ ದೃಢವಾದ ತೀರ್ಮಾನ.

ಊರ ನೀರಾಸರೆಯು ತುಂಬಿ ಹರಿದಂತೆ,
ಲೋಕಕಲ್ಯಾಣದಿ ಮನತೆತ್ತ ಮಹಾತ್ಮನ ಸಿರಿಯು (215)

ಪರರಿಗುಪಕಾರವ ಬಯಸುವ ನಯವಗಳಿಸಿದವನ ಬಳಿ
ಇರುವ ಸಿರಿಯು ಊರ ಮಧ್ಯದ ಮರವು ಫಲಿತು
ಫಲವ ಕೊಟ್ಟಂತೆ (216)

ಒಂದು ವೇಳೆ ತನ್ನ ಪರೋಪಕಾರ ಗುಣದಿಂದ ಒಬ್ಬನಿಗೆ ಕೇಡು ಸಂಭವಿಸುವುದಾದರೆ, ತನ್ನನ್ನು ಮಾರಿಕೊಂಡಾದರೂ ಆ ಗುಣವನ್ನು ಪಡೆಯಬೇಕು. (220)

ಉಳ್ಳವರು ಇಲ್ಲದವರಿಗೆ ನೆರವಾಗಬೇಕೆಂದು ವಳ್ಳುವರು ಸಾವಿರಾರು ಮಾರ್ಗಗಳಿಂದ ಅವರ ಮನಸ್ಸನ್ನು ಪ್ರೇರಿಸುತ್ತಾರೆ. 225ನೆಯ ಕುರಳಿನಲ್ಲಿ ಅವರು ಪ್ರತಿಪಾದಿಸುವ ರೀತಿ ಇದು:

ತಪೋಬಲದಿಂ ಹಸಿವನಡಗಿಪ ಬಲವು
ಮಹಾಬಲವೆನಿಸಿದರು
ಹಸಿದು ಕಂಗೆಟ್ಟವರಿಗುಣಲಿತ್ತು ತಣಿದ ಬಲವು
ಹಿಂದೆ ನಿಲ್ಲುವುದು (225)

ಬಾಳಿನುದ್ದಕ್ಕೂ ಸಂಪತ್ತನ್ನು ಶೇಖರಿಸಿ, ಸಾಯುವಾಗ ತಾವು ಕಷ್ಟಪಟ್ಟು ಗಳಿಸಿದ ಸಂಪತ್ತನ್ನು ಬಿಟ್ಟುಹೋಗುವ ಕಲ್ಲೆದೆಯ ಕೃಪಣರನ್ನು ಕಂಡು ಮರುಕಗೊಂಡು ಸೂಕ್ಷ್ಮವಾದ ವ್ಯಂಗ್ಯನಗೆಯಿಂದ ಪ್ರಶ್ನಿಸುತ್ತಾರೆ:

ಕೊಟ್ಟು ನಲಿವ ಸುಖವನು ಕಂಡರಿಯರಲ್ಲ! ಹಣವ
ಬಯ್ತಿಟ್ಟು ಕಳೆವ ಕಲ್ಲು ಮನಸ್ಸಿನ ಕೃಪಣರು! (228)

ಕೊಡುಗೆಯನ್ನು ಕುರಿತು ಹೇಳುವ ಅಧ್ಯಾಯದ ಕೊನೆಯಲ್ಲಿ ವಳ್ಳುವರು ಈ ಕೆಳಗೆ ಕಾಣುವ ಕುರಳಿನೊಂದಿಗೆ ತುತ್ತತುದಿಯನ್ನು ಮುಟ್ಟುತ್ತಾರೆ:

ಸಾವಿಗೂ ಮಿಗಿಲೆನಿಪ ಕಡು ದುಃಖವೊಂದಿಲ್ಲ ದಿಟ!
ಕೊಡುವ ಶಕ್ತಿಯಡಗಿದಡೆ ಸಾವೆ ಸವಿಯೂಟವಾಗುವುದು (230)

ಇದುವರೆಗೆ ಹೇಳಿದ ಎಲ್ಲ ಗುಣಗಳನ್ನು ಪಟ್ಟಿಮಾಡಿ ಅವು ಮನೆವಾರ್ತೆ ನಡೆಸುವವನಿಗೆ ಅರ್ಹವಾದ ಆದರ್ಶ ಗುಣಗಳೆಂದು ಮುಸದಟ್ಟು ಮಾಡಿದ ಮೇಲೆ ವಳ್ಳುವರು ಅವನಿಗೆ ಇವುಗಳನ್ನು ಆಚರಿಸುವುದರಿಂದ ಕೀರ್ತಿ (ಪುಗಳ್) ದೊರೆಯುವುದೆಂದು ತಿಳಿಯಪಡಿಸುತ್ತಾರೆ. ಈ ಆದರ್ಶವನ್ನು ಈ ಕೆಳಗೆ ಹೇಳಿರುವ ಮಾತುಗಳ ಮೂಲಕ ಆಕರ್ಷಕವನ್ನಾಗಿ ಮಾಡುತ್ತಾರೆ.

ಲೋಕದಲಿ ಏಕೈಕವೆನಿಸಿ ನೆಲೆಸುವ ಕೀರ್ತಿಯಲ್ಲದೆ
ಅಳಿವಿಲ್ಲದುಳಿವುದು ಬೇರೆ ಇಲ್ಲ (233)

ಕೀರ್ತಿಯನ್ನು ಸಾಧಿಸುವ ಅಗತ್ಯವನ್ನು ಒತ್ತಿ ಹೇಳುತ್ತ:

ಹುಟ್ಟಿದರೆ ಹೊಗಳಿಕೆ ತರುವ ಗುಣದೊಡನೆ ಹುಟ್ಟಲಿ
ಇಲ್ಲವಾದರೆ ಹುಟ್ಟದಿರುವುದೇ ಲೇಸು (236)

ಎನ್ನುತ್ತಾರೆ ವಳ್ಳುವರು. ಮತ್ತೆ ಕೋಪದಿಂದ ಹಲ್ಲು ಕಡಿಯುತ್ತ ಅವರು ಮುಂದುವರಿಸುತ್ತಾರೆ:

ಅಪಕೀರ್ತಿ ಹೊತ್ತ ಒಡಲಿನ ಭಾರವನು ತಾಳುವ ನೆಲದಲಿ
ಸಫಲವೀವ ಬೆಳೆಯು ಕುಂದಿಹೋಗುವುದು (239)

240ನೆಯ ಕುರಳಿನಲ್ಲಿ ತಿರುವಳ್ಳುವರು ತಮ್ಮ ಅಂತಿಮ ತೀರ್ಮಾನವನ್ನು ಅಡಕಮಾಡಿರುತ್ತಾರೆ:

ಕೀರ್ತಿಗೆ ಕುಂದಿಲ್ಲದೆ ನಡೆವವರೆ ಬದುಕಬಾಳುವರು
ಕೀರ್ತಿಯಳಿವಂತೆ ನಡೆವವರು ಇದ್ದು ಸತ್ತವರು (240)

ಯಶೋಭಿಲಾಷೆ ಸಂಪೂರ್ಣವಾಗಿ ನಿಸ್ವಾರ್ಥವಾದ ಗುಣವಲ್ಲವೆನ್ನುವುದು ನಿಜ. ಆದರೆ ಒಬ್ಬ ಸಾಮಾನ್ಯ ಮನುಷ್ಯನು ಅತಿಥಿ ಸತ್ಕಾರ, ಕೃತಜ್ಞತೆ, ನಿಷ್ಪಕ್ಷಪಾತ, ವಿನಯ, ಸದಾಚಾರ, ಸಹನೆ-ಇವೇ ಮೊದಲಾದ ಆಹ್ಲಾದಕರವೂ ನಿಸ್ವಾರ್ಥವೂ ಆದ ಗುಣಗಳನ್ನು ಆಚರಿಸುವುದಾದರೆ ಅದು (ಯಶೋಭಿಲಾಷೆ) ಸಾಕಷ್ಟು ಉತ್ಕೃಷ್ಟವಾದ ಮಾನಸಿಕ ಪ್ರಚೋದನೆಯೆನ್ನುವುದನ್ನು ವಳ್ಳುವರು ಬಲ್ಲರು.

ಈ ಸದ್ಗುಣಗಳನ್ನು ಗೃಹಸ್ಥನು ಬೆಳೆಸಿಕೊಂಡು ಸಮಾಜದ ದೃಷ್ಟಿಯಲ್ಲಿ ಕೀರ್ತಿಯನ್ನು ಸಂಪಾದಿಸಿಕೊಳ್ಳಬೇಕೆಂದು ಪ್ರಚೋದಿಸಿದ ಬಳಿಕ ವಳ್ಳುವರು ಆತನ ಮುಂದೆ ಈ ಪ್ರಪಂಚದಲ್ಲಿ ಶಾಶ್ವತವೂ ಅವಿಚ್ಛಿನ್ನವೂ ಆದ ಆನಂದದಿಂದ ಉನ್ನತವಾದ ಆದರ್ಶಜೀವನವನ್ನು ನಡೆಸುವುದನ್ನು ಆತನ ಮುಂದೆ ಇಡುವರು. ಈ ಆದರ್ಶವನ್ನು ಸಾಧಿಸಲು ಅವನು ತ್ಯಾಗಕ್ಕೆ ಸಿದ್ಧವಾಗಬೇಕಾಗುತ್ತದೆ. ತ್ಯಾಗವೆಂದರೆ ಲೋಕದ ಬದುಕಿನಿಂದ ದೂರವಾಗಿರಬೇಕೆಂದಲ್ಲ. ತನ್ನಲ್ಲಿರುವ ಕೆಲವು ಮಮಕಾರದ ಪ್ರವೃತ್ತಿಗಳನ್ನು ಅವನು ತ್ಯಜಿಸಬೇಕು. ಕೆಲವು ಕಠಿಣವೆನಿಸಿದ ವಿಶಿಷ್ಟಧರ್ಮಗಳನ್ನು ಪಾಲಿಸುವ ಮೂಲಕ, ಗೃಹಸ್ಥನು ಸನ್ಯಾಸಿ ಅಥವಾ ವಿರಾಗಿಯಾಗುವಂತೆ ವಳ್ಳುವರು ಮನವಿ ಮಾಡಿಕೊಳ್ಳುತ್ತಾರೆ. ಈ ದಿಶೆಯಲ್ಲಿ ಅವನು ಮೊತ್ತ ಮೊದಲನೆಯದಾಗಿ ದೈವಿಕ ಅನುಗ್ರಹವನ್ನು ಪಡೆಯಬೇಕು.

ನಲ್ನಡೆಯುಲರಸುತ್ತ ಕರುಣೆಯಲಿ ಬಾಳಬೇಕು
ಹಲ ನಡೆಗಳಲಿ ಪರಿಕಿಸಿದರು ಕರುಣೆಯೇ ಆಧಾರ (242)

ಯಾರ ಹೃದಯಗಳಿಂದ ದಯೆಯ ಚಿಲುಮೆ ಚಿಮ್ಮುವುದೋ ಅಂಥವರು ಕತ್ತಲೆ ಕವಿದಿರುವ ದುಷ್ಪ್ರಪಂಚವನ್ನು (ನರಕವನ್ನು) ಎಂದೆಂದಿಗೂ ಪ್ರವೇಶಿಸುವುದಿಲ್ಲ. ವಳ್ಳುವರು ಸರಿಯಾಗಿಯೇ ಸಾರಿ ಹೇಳುತ್ತಾರೆ :

ಜೀವಿಗಳ ಕಾದು ಕರುಣೆಯ ತೋರುವಗೆ ತನ್ನ
ಜೀವಕಂಜುವೊಲು ಮಾಳ್ಪ ದುಷ್ಕರ್ಮ ಬಾಧಿಸದು (244)

ಈ ಕುರಳು ಮಹಾತ್ಮಗಾಂಧಿಯವರಂಥ ಹುತಾತ್ಮರ ಬದುಕಿಗೆ, ನಡತೆಗೆ ವ್ಯಾಖ್ಯಾನವೂ ಹೌದು, ದೃಷ್ಟಾಂತವೂ ಹೌದು.

ಹಣವಿಲ್ಲದವರಿಗೆ ಈ ಲೋಕದ ಸುಖವಿಲ್ಲದಿರುವಂತೆ
ಕರುಣೆಯಿಲ್ಲದವರಿಗೆ ಪರಲೋಕ ಪ್ರಾಪ್ತಿಯೂ ಇಲ್ಲ. (247)

ಸಿರಿಬತ್ತಿದವರು ಎಂದಾದರೊಮ್ಮೆ ಚಿಗುರಿ
ಫಲವ ಪಡೆಯುವರು
ಕರುಣೆ ಬತ್ತಿದ ಜನರು ನಿಷ್ಫಲರೆ ಆಗುವರು (248)

ಕರುಣೆಯರಿದನ ಗುಣಭರಿತ ನಡೆಯು
ಅರಿವಿಲ್ಲದನ ನಿಜದ ಕಾಣ್ಕೆಯು ತೆರದಿ
ನಿಷ್ಫಲವೆನಿಪುದು (249)

ವಳ್ಳುವರ ದೃಷ್ಟಿಯಲ್ಲಿ ಕರುಣೆಯನ್ನು ಬೆಳೆಸಿಕೊಳ್ಳುವುದರಿಂದ ಎಲ್ಲ ಜೀವಿಗಳ ಮೇಲೂ ದಯೆ ಅನುಕಂಪಗಳು ಅನಿವಾರ್ಯವಾಗಿಯೇ ಉಂಟಾಗುತ್ತವೆ. ಆದ್ದರಿಂದ ಗೃಹಸ್ಥನು ದಯಾಳುವಾಗುವ ಸಲುವಾಗಿಯೇ ಮಾಂಸವನ್ನು ತಿನ್ನುವುದನ್ನು ಬಿಡಬೇಕೆಂದು ಅವರು ಕರೆಕೊಡುತ್ತಾರೆ. 251 ನೆಯ ಕುರಳಿನಲ್ಲಿ ಅವರು ಪ್ರಶ್ನಿಸುತ್ತಾರೆ :

ತನ್ನ ಮೈ ಮಾಂಸವ ಕೊಬ್ಬಿಸಲು ಪರಮಾಂಸ
ಭಕ್ಷಿಪನು ಕರುಣೆಯನಾಳುವುದೆಂತು ? (251)

"ತಾನು ಇತರರು ಕೊಂದ ಪ್ರಾಣಿಯ ಮಾಂಸವನ್ನು ಮಾತ್ರ ತಿನ್ನುತ್ತೇನೆ, ನಾನೇನೂ ಪ್ರಾಣವಧೆ ಮಾಡುವುದಿಲ್ಲ" ಎಂಬ ಕುತರ್ಕವನ್ನು ಈ ಕೆಳಗಿನ ಕುರಳಲ್ಲಿ ಪ್ರತಿಭಟಿಸಿ ಹೇಳುತ್ತಾರೆ :

ತಿನಲೆಂದು ಪ್ರಾಣಿಯನು ಕೊಲದು ಈ ಲೋಕ
ವೆಂದಾದರೆ ವಿಕ್ರಯಕೆಂದು ಮಾಂಸವನು
ತರುವವರೂ ಇಲ್ಲವೆನಿಪರು (256)

ಈ ಸುಸಂದರ್ಭವನ್ನು ಸದುಪಯೋಗ ಪಡಿಸಿಕೊಂಡು ಅವರ ಕಾಲದಲ್ಲಿ ಧರ್ಮದ ಹೆಸರಿನಲ್ಲಿ ಅಸಂಖ್ಯ ಪ್ರಾಣಿಗಳನ್ನು ಬಲಿಕೊಡುವ ಪದ್ಧತಿಯನ್ನು ಖಂಡಿಸಿರುತ್ತಾರೆ :

ಘೃತವ ಸುರಿದು ಗೈವ ಸಾವಿರಯಾಗಗಳಿಂ
ಪ್ರಾಣಿಯೊಂದರ ಒಡಲು ಹರಿದು ತಿನದಿರುವುದೇ ಲೇಸು (259)

ಕೊಲದ ನೇಮದವನ ಮಾಂಸವನು ವರ್ಜಿಪನ
ಸಕಲ ಪ್ರಾಣಿಗಳು ಕೈ ಮುಗಿದು ಪೂಜಿಪವು (260)

ಮುಂದೆ ವಳ್ಳುವರು ತಪಸ್ಸು ಅಥವಾ ಧ್ಯಾನವನ್ನು ಕೊಂಡಾಡುವರು. ಕಠಿಣ ವ್ರತದ ಆಚರಣೆ, ಪರಜೀವಿಗಳನ್ನು ನೋಯಿಸದಿರುವುದು ತಪಸ್ಸಿನ ಅಂಗಗಳು. ತಪಸ್ಸಿನ ತನ್ನ ಆಧ್ಯಾತ್ಮಿಕ ಬಲವನ್ನು ಹೆಚ್ಚಿಸಿಕೊಂಡ ಮನುಷ್ಯ ತನ್ನ ಪರಿಸರವನ್ನೇ ಪರಿವರ್ತಿಸುವ ಪ್ರಚಂಡ ಶಕ್ತಿಗಳನ್ನು ಪಡೆಯುತ್ತಾನೆ.

ಒಲ್ಲದವರ ನಡುಗಿಪ, ಒಲಿದವರವೆತ್ತುವ ಬಲವ
ನೆನೆದ ಮಾತ್ರಕ್ಕೆ ತಪವು ಕೈಗೂಡಿಸುವುದು (264)

ಬೇಡಿದ ಫಲಗಳನು ಬೇಡಿದಂತೆಯೆ ಪಡೆಯೆ
ತಪವನಿಂದೆ, ಇಲ್ಲಿಯೆ ಆಚರಿಸಬೇಕು (265)

ತಪವಗೈವವರು ಕರ್ಮಗಳ ಒಳಿತಾಗಿ ಗೈವರು
ಮತ್ತಲ್ಲದವರು ಅತ್ಯಾಶೆಯಿಂ ಹೀನ ಕರ್ಮಗಳಲಿ
ತೊಡಗುವರು (266)

ಕಷ್ಟಗಳ ಬಿಸಿ ತಟ್ಟೆ ಕಠಿಣತಪ ಗೈವವರು
ಪುಟವಿಟ್ಟ ಹೊನ್ನಿನೊಲು ಲೋಕವನೆ ಬೆಳಗುವರು (267)

ಆತ್ಮಬಲವನು ತನ್ನಂಕೆಯಲಿಡುತ ಅಹಮಿಕೆಯು
ಕಳೆದವರಿಗೆ ಮರ್ತ್ಯಜೀವಿಗಳೆಲ್ಲ ತಲೆವಾಗಿ ವಂದಿಪವು (268)

ನೋಂಪಿಯ ಬಲ ಪಡೆದುಕೊಂಡವಗೆ ಕಾಲನನು
ಮೆಟ್ಟಿ ಹಿಮ್ಮೆಟ್ಟಿಸುವ ಬಲ ಬರುವುದು (269)

ತಪವನಾಚರಿಪರು ಕೆಲರಾಗಿ, ಬಿಟ್ಟವರು
ಹಲರಾದ ಕಾರಣ ಉಣಲು ಇರದವರ ಎಣಿಕೆ
ಮೀರುತಿಹುದು (270)

ತಪಸ್ಸಿನ ಆಚರಣೆಯನ್ನು ಶ್ಲಾಘಿಸುತ್ತಿರುವಲ್ಲಿ ವಳ್ಳುವರು ಕಪಟವೇಷದಿಂದ ತಪಸ್ವಿಗಳೆಂದು ಮೆರೆಯುವವರನ್ನು ಅಲ್ಲಗಳೆಯುವರು.

ವಂಚನೆಯ ಮನದವನ ಹುಸಿಯಾಟವ ಕಂಡು
ಶರೀರದೊಳಗಿರ್ಪ ಪಂಚಭೂತಗಳು ತಮ್ಮೊಳಗೇ
ನಗುತಿರ್ಪವು (271)

ಬಾಹ್ಯ ವೇಷಗಳಿಂದ ತಪ್ಪುದಾರಿಗೆ ಸೆಳೆಯಲ್ಪಡುವವರನ್ನು ವಳ್ಳುವರು ಇಲ್ಲಿ ಎಚ್ಚರಿಸಿರುತ್ತಾರೆ:

ಕಣೆ ನೇರ ಆದರ ನಡೆ ಕ್ರೂರ
ವೀಣೆಯದು ಡೊಂಕು ಸ್ವರ ಇಂಪು
ಇದನರಿತು ಹೊರ ರೂಪವ ಮರೆತಂ
ನಡೆಯಿಂದವರ ಗ್ರಹಿಸಬೇಕು (279)

ಬಾಹ್ಯ ಪರಿಕರಗಳನ್ನು ಹೊಂದಿದ್ದು ವಾಸ್ತವಿಕವಾಗಿಯೂ ಆಚರಣೆಯಲ್ಲಿ ಆಸ್ತಿಕ ಮನೋಧರ್ಮವಿಲ್ಲದವರನ್ನು ಕಂಡು ವಳ್ಳುವರು ತಿವಿದು ಮೂದಲಿಸುತ್ತಾರೆ:

ತಲೆಯ ಬೋಳಿಸಲೇಕೆ ಜಟೆಯ ಬೆಳೆಯಿಸಲೇಕೆ
ಲೋಕ ನಿಂದಿಪ ದುಷ್ಕರ್ಮಗಳ ದೂರವಿಡೆ (280)

ಅನಂತರ ವಳ್ಳುವರು ಪರರ ಸ್ವತ್ತಿಗೆ ಆಸೆ ಪಡದಿರುವಂತೆ ವಿನಂತಿ ಮಾಡಿಕೊಳ್ಳುತ್ತಾರೆ :

ವಿವೇಕಿಗಳೆದೆಯಲಿ ಧರ್ಮ ನೆಲೆಸಿದವೋಲು
ಕಳ್ಳರ ಹೃದಯದಲಿ ನಿಲ್ಪುದು ವಂಚನೆಯು (288)

ಅನಂತರ ತ್ಯಾಗಿಯಾದವನು ಸತ್ಯವಂತನಾಗಿರುವುದನ್ನು ಅಭ್ಯಾಸ ಮಾಡಬೇಕು.

ನಿಜವೆಂದು ಕರೆಯಪಡುವುದಾವುದೆನೆ
ಕೇಡಿಲ್ಲದ ಸೊಲ್ಲನಾಡುವುದು (291)

ವಳ್ಳುವರು ಸತ್ಯವನ್ನೂ ಒಳ್ಳೆಯತನವೆಂಬ ಒರೆಗಲ್ಲಿನ ಮೇಲಿಟ್ಟು ಪರೀಕ್ಷಿಸ ಬಯಸುತ್ತಾರೆ, ಎನ್ನುವುದನ್ನು ಹೇಳಬೇಕಾಗುತ್ತದೆ. ಒಂದು ವೇಳೆ ನಿಜವನ್ನು ನುಡಿಯುವುದರಿಂದ ಕೆಡುಕಾದರೆ ಏನು ಮಾಡಬೇಕು ? ವಳ್ಳುವರು ಈ ಪ್ರಶ್ನೆಯನ್ನು ನಿರೀಕ್ಷಿಸಿ ಈ ಕೆಳಕಂಡ ಕುರಳಿನಲ್ಲಿ ಉತ್ತರಿಸುತ್ತಾರೆ :

ಹುಸಿ ನುಡಿಯಿಂ ಕೇಡರಿಯದ ನಲ್ಮೆಯದು ಫಲಿಸೆ
ಹುಸಿಯು ದಿಟದ ಸಾಲಿಗೆ ಸೇರುವುದು (292)

ಸತ್ಯವಂತನನ್ನು ಸಮಸ್ತ ಲೋಕವೂ ಕೊಂಡಾಡುವುದೆಂದು ಅವರು ಹೇಳುತ್ತಾರೆ :

ಹುಸಿ ನುಡಿಯ ಮನದಿ ಕಿತ್ತೊಗೆದ ಸತ್ಯ ಸಂಧನನು
ಲೋಕವು ತನ್ನ ಮನದಿ ತುಂಬಿಟ್ಟುಕೊಳ್ಳುವುದು (294)

ದಾನಗಳನ್ನು ನೀಡುವುದು ತಪಸ್ಸನ್ನು ಮಾಡುವುದಕ್ಕಿಂತಲೂ ಸತ್ಯವನ್ನು ನುಡಿಯುವುದು ಮೇಲಾದುದೆಂದು ವಳ್ಳುವರು ಭಾವಿಸುತ್ತಾರೆ. ಪ್ರಾಮಾಣಿಕತೆಯ ಆಧ್ಯಾತ್ಮಿಕ ಗುಣದ ಬಗ್ಗೆ ವಳ್ಳುವರಿಗೆ ಎಷ್ಟು ವಿಶ್ವಾಸವಿದೆಯೆಂದರೆ ಅವರು ಅದನ್ನು ಹೀಗೆ ಸಮರ್ಥಿಸುತ್ತಾರೆ :

ಸುಳ್ಳಾಡನೆಂಬುದನು ಹುಸಿಯಾಗಿಸದವನು
ಉಳಿದ ಧರ್ಮಗಳ ಮರೆಯುವುದು ಲೇಸು (297)

ಬಾಹ್ಯಶುದ್ಧಿಗೆ ನೀರು ಶೌಚಕೊದಗುವುದು
ಅಂತರಂಗದ ಶುದ್ಧಿಯು ನಿಜದೊಳಗೆ ಕಾಣಪಡುವುದು (298)

ಬೆಳಕೆಂದು ಕಾಣ್ಬುದೆಲ್ಲವು ಬೆಳಕಲ್ಲ ಸಜ್ಜನಗೆ
ಸುಳ್ಳಾಡದಿರುವುದೆ ಬೆಳಕು (299)

ನಿಜ ಹೇಳುವುದನ್ನು ಕುರಿತ ಅಧ್ಯಾಯದ ಕೊನೆಯಲ್ಲಿ ತಿರುವಳ್ಳುವರು ಅವರ ಇಡೀ ಜೀವನಾನುಭವದ ಪಾಕ ತೆಗೆದು ನ್ಯಾಯವಾದಿಯಂತೆ ತೀರ್ಪು ಹೇಳುತ್ತಾರೆ:

ಧರ್ಮ ಶಾಸ್ತ್ರಗಳಲಿ ನಾವು ನಿಜವೆಂದು ಕಂಡವುಗಳಲಿ
ಸತ್ಯಸಂಧತೆಗಿಂ ಮಿಗಿಲು ಬೇರೆ ಕಾಣೆವು (300)

ಅನಂತರ ಈ ಯೋಗಿಯು ಕೋಪವನ್ನು ನಿಗ್ರಹಿಸಬೇಕೆಂದು ನಮಗೆ ತಿಳಿವಳಿಕೆ ಹೇಳುತ್ತಾರೆ. ಒಬ್ಬ ಮನುಷ್ಯನು ತನ್ನ ದಣಿಯ ಮೇಲೆ ಕೋಪಗೊಳ್ಳದಿರಬಹುದು; ಕಾರಣ ಅವನನ್ನು ಎದುರಿಸಲು ಧೈರ್ಯ ಸಾಲದು. ಆದರೆ ತನ್ನ ಸೇವಕನೊಂದಿಗೆ ವ್ಯವಹರಿಸುವಾಗ ಅವನು ಪದೇ ಪದೇ ತನ್ನ ಸಂಯಮವನ್ನು ಕಳೆದುಕೊಳ್ಳಬಹುದು. ಆದ್ದರಿಂದ ವಳ್ಳುವರು ಯಾವ ವಿಧವಾದ ಸಂಯಮ ಸೂಕ್ತವೆಂದು ಹೇಳುತ್ತಾರೆ.

ಕೋಪದಲಿ ಪರಗೆ ಕೇಡು ಫಲಿಸುವ ಎಡೆಯಲಿ
ಅಡಗಿ ನಡೆವವನೆ ಕೋಪ ನಿಗ್ರಹಿ ಎನಿಪನಂ
ಕೇಡಿಲ್ಲದೆಡೆಯಲಿ, ಕೋಪವನು ಕಾದರೇನು ಬಿಟ್ಟರೇನು ? (301)

304 ನೆಯ ಕುರಳಲ್ಲಿ ಹೇಳುತ್ತಾರೆ :

ನಗೆಯನು, ಹರ್ಷೋಲ್ಲಾಸವನು ಕೊಲುವ ಕೋಪದಿಂ
ಕಡು ಕ್ರೂರ ಹಗೆಯುಂಟೆ ಬೇರೆ ? (304)

ಅನಂತರ ವಳ್ಳುವರು ಕೋಪವು ಮಾನವನ ಶರೀರದ ಮೇಲೆ ಮಾಡುವ ದುಷ್ಪರಿಣಾಮವನ್ನು ಕುರಿತು ಉಲ್ಲೇಖಿಸುತ್ತಾರೆ :

ತನ್ನ ತಾ ಕಾದು ಕೊಳುವುದಿರೆ, ಕೋಪವನು
ಅಡಗಿಸಿಡಬೇಕು ಕಾಯದಿರೆ ಅದುಂ ತನ್ನನೇ
ಕೊಂದು ಬಿಡುವುದು (305)

'ಕೇಡೆಣಿಸದಿರುವುದು' ಎಂಬ ಮುಂದಿನ ಅಧ್ಯಾಯದಲ್ಲಿ ವಳ್ಳುವರು ತಪೋಧನರಾದವರನ್ನು ಕುರಿತು ಹೇಳುವ ಮಾತಿದು :

'ಎನಿತಲ್ಪವಾಗಿರಲಿ, ಎಂದೆಂದು, ಯಾರಿಗೂ
ಮನದಿ ಕೇಡೆಣಿಸದಿರುವುದು ಲೇಸು (317)

ಕೆಡುಕು ಎಷ್ಟು ನೋವನ್ನು ಉಂಟುಮಾಡುತ್ತದೆ ಎನ್ನುವುದು ಪ್ರತಿಯೊಬ್ಬನಿಗೂ ಗೊತ್ತು-ಎಂದಮೇಲೆ ಅವನು ಇನ್ನೊಬ್ಬರಿಗೆ ನೋವುಂಟು ಮಾಡುವ ಕೆಡುಕನ್ನು ಬಗೆಯುಬಹುದೆ?

ತನ್ನ ಜೀವಕೆ ಕೇಡು ಅಹಿತವಾಗುವುದು ತಿಳಿದು
ಪರಜೀವಿಗೇಕೆ ಕೇಡು ಬಗೆವನು ? (318)
ಮುಂಜಾನೆ ತಾನೊಬ್ಬನಿಗೆ ಬಯಸಿದ ಕೇಡು
ಸಂಜೆ ತನ್ನನೆ ಅರಸಿ ಬೆನ್ನಟ್ಟುವುದು (319)

ಕೊಲ್ಲದಿರುವ ನಿರ್ಧಾರವನ್ನು ಕುರಿತ ಮುಂದಿನ ಅಧ್ಯಾಯದಲ್ಲಿ ತಿರುವಳ್ಳುವರ ಭಾವನೆಯ ಕೇಂದ್ರವೇ ಅಡಕವಾಗಿದೆ. ಮನುಷ್ಯನು ಎಲ್ಲ ಪ್ರಾಣಿಗಳನ್ನೂ ಪೂಜ್ಯ ಭಾವನೆಯಿಂದ ಕಾಣಬೇಕು. ಯಾವ ರೂಪದಲ್ಲಿ ಅಗೌರವ ತೋರಿದರೂ ಅವನು ದುರ್ಗುಣದ ಬೀಜವನ್ನು ಬಿತ್ತಿದಂತೆಯೇ ಎಂದು ಅವರು ಭಾವಿಸುತ್ತಾರೆ. 323ನೆಯ ಕುರಳಿನಲ್ಲಿ ಹೇಳಿರುವುದೇನೆಂದರೆ:

ಏಕೈಕವೆನಿವುದು ಕೊಲದಿರುವ ಮಾನನೆಲೆಯು
ಸುಳ್ಳಾಡದಿರುವುದು ಅದಕ್ಕೆ ಮತ್ತಿನದು (323)

ಈ ಬಗ್ಗೆ ವಳ್ಳುವರ ಪ್ರಕಾಶಮಾನವಾದ ಅಂತರ್ದೃಷ್ಟಿ ಹಲವಾರು ರೀತಿಗಳಲ್ಲಿ ವ್ಯಕ್ತವಾಗಿದೆ.

ಸನ್ಮಾರ್ಗ ಎನಪಡುವುದಾವುದೆನೆ ಯಾವುದೊಂದನು
ಕೊಲದಿರುವ ನೆಲೆಯನು ಮನಕೆ ಸೂಚಿವುದು (324)

ನೀಚ ಕೆಲಸ ಯಾವುದು ಎಂಬ ಅರಿವು ಇರುವವರ ಮನಸ್ಸಿನಲ್ಲಿ ಕೊಲೆಗೆಲಸವು ಹೊಲೆಗೆಲಸವಾಗುತ್ತದೆ. (329)

ಈ ಸದ್ಗುಣಗಳನ್ನು ಆಚರಿಸಬೇಕೆಂದು ಗೃಹಸ್ಥನಿಗೆ ಕರೆಯಿತ್ತ ಬಳಿಕ, ಅವರು ತಾವು ಬೋಧಿಸಿದ ಸದ್ಗುಣಗಳನ್ನು ಕೈಕೊಳ್ಳುವುದರಲ್ಲಿ ಹಿಂತೆಗೆದು ಮುಂದೆ ಹಾಕದಿರುವುದಕ್ಕಾಗಿ ಲೌಕಿಕ ವಸ್ತುಗಳ ಅಶಾಶ್ವತೆಯನ್ನು ಆತನಿಗೆ ನೆನಪು ಮಾಡಿಕೊಡುತ್ತಾರೆ.

ನೆಲೆಯಾಗಿ ನಿಲ್ಲದೈಸಿರಿಯು ಸ್ಥಿರವೆಂದು ತಿಳಿವ
ಕೀಳರಿವು ಎಲ್ಲಕೂ ಕಡೆಯಾಗಿ ಪರಿಗಣಿಪುದು (331)

ಸಂಪತ್ತಿನ ನಶ್ವರತೆಯನ್ನು ಕುರಿತು ಅವರು ಹೀಗೆ ಹೇಳುತ್ತಾರೆ :

ನಾಟಕವ ನೋಡೆ ಸೇರ್ವ ಮಂದಿಯು ತೆರದಿ ಹೇರಳ ಸಿರಿಯು
ನಾಟಕವು ಮುಗಿದೊಡನೆ ಚದುರಿ ಹೋಗುವುದು (332)

ಸಂಪತ್ತು ಸ್ವತಃ ಅಶಾಶ್ವತವಾದರೂ ಆ ಸಂಪತ್ತಿನ ನೆರವಿನಿಂದ ಶಾಶ್ವತ ಮೌಲ್ಯಗಳನ್ನುಳ್ಳ ಕಾರ್ಯಗಳನ್ನು ಮಾಡಬಹುದು ಎಂದು ವಳ್ಳುವರು ಹೇಳುತ್ತಾರೆ.

ಸಿರಿಯ ಚಂಚಲಗುಣವರಿತು, ಸ್ಥಿರವಹ
ಧರ್ಮಕಾರ್ಯಗಳನಂದೆ ಮಾಡಿಬಿಡಬೇಕು (333)

ಮಾನವನ ಬದುಕಿನ ನಶ್ವರತೆಯನ್ನು ಕುರಿತು ವಳ್ಳುವರು ಹೇಳುತ್ತಾರೆ :

ನಿನ್ನೆ ಉಸಿರೊಡನಿದ್ದವನೊಬ್ಬ ಇಂದಿಲ್ಲವೆಂಬ
ಹಿರಿಮೆಯನ್ನು ಹೊತ್ತಿರುವುದೀ ಲೋಕ (336)

ಇನ್ನು ಕಾಲ ಚಲಿನೆಯ ಬಗ್ಗೆ ಹೇಳುವುದಾದರೂ ಏನು ? ಕಳೆದುಹೋಗುವ ಪ್ರತಿಯೊಂದು ದಿನವೂ ಸಾವನ್ನು ದಿನ ದಿನಕ್ಕೆ ಹತ್ತಿರ ಕರೆದು ತರುತ್ತದೆ.

ಬಾಳ ಪರಿಕಿಸಿ ತಿಳಿದವರ ಕಣ್ಣಿನಲಿ, ದಿನವೊಂದು
ಕಾಲದ ಗಡಿಯಾಗಿ ನಿಂದು ಒಡಲ ಸೀಳುವ ಗರಗಸದಂತೆ
ಸರಿದು ಸಾಗುವುದು (334)

ಆದ್ದರಿಂದ ಒಳ್ಳೆಯ ಕೆಲಸಗಳನ್ನು ಒಡನೆಯೇ ಮಾಡಿ ಮುಗಿಸಬೇಕು.

ನಾಲಗೆಯುಡುಗಿ ಬಿಕ್ಕಳಿಕೆ ಬರುವ ಮುನ್ನ
ಸತ್ಕಾರ್ಯಗಳ ಮುನ್ನುಗ್ಗಿ ಮಾಡಿಬಿಡಬೇಕು (335)

ಒಪ್ಪತ್ತು ಬಾಳುವುದು ಎಂತೆಂಬುದರಿಯರು, ಮನದಿ
ಕೋಟಿಗೂ ಮಿಗಿಲಾದ ಎಣಿಕೆ ತಾಳುವರು (336)

ಶರೀರ ಮತ್ತು ಆತ್ಮಗಳ ಸಂಬಂಧದ ಬಗ್ಗೆ ತಿರುವಳ್ಳುವರು ಕೊಡುವ ಕಿತ್ತನೆಯ ಚಿತ್ರವಿದು.

ಚಿಪ್ಪೊಡೆದು ಹಕ್ಕಿ ಹಾರುವ ತೆರದಿ
ಒಡಲಿನೊಡನೆ ಜೀವನ ನಂಟು (338)

ಮೈ ಮರೆತು ನಿದ್ದೆಯ ಹೋಲುವುದು ಮರಣವು
ನಿದ್ದೆಯಂ ಕೊಡವಿ ಎದ್ದಂತೆ ಜನನವು (339)

ಜನ್ಮ ಜನ್ಮಾಂತರಗಳಲ್ಲಿ ಒಂದು ಶರೀರದಿಂದ ಮತ್ತೊಂದು ಶರೀರಕ್ಕೆ ಹೋಗಿ ನೆಲೆಸುವ ಆತ್ಮಗಳ ದಿಗ್ಭ್ರಾಂತಿಯನ್ನು ನೆನೆದು ವಳ್ಳುವರು ಕನಿಕರದಿಂದ ಹೇಳುತ್ತಾರೆ :

ಒಡಲಿನಲಿ ತತ್ಕಾಲದಲಿ ತಂಗುವ ಪ್ರಾಣವಿದಕೆ
ನೆಲೆಯಾದ ಬೀಡೊಂದು ಸಿದ್ಧವಾಗಿಲ್ಲವೇನೋ ! (340)

ಈ ರೀತಿ ಸಂಪತ್ತಿನ ಚಂಚಲತೆ ಮತ್ತು ಮಾನವನ ನಶ್ವರತೆಗಳತ್ತ ಬೆರಳು ಮಾಡಿತೋರಿ ವಳ್ಳುವರು ತ್ಯಾಗಿಯಾದವನಿಗೆ ತಾವು ವಿಧಿಸಿರುವ ಎಲ್ಲ ಸದ್ಗುಣಗಳನ್ನೂ ಆಚರಿಸುವುದರ ಮೂಲಕ ಶರೀರದ ಸೂರ್ಯ ಪ್ರಕಾಶಿಸುತ್ತಿರಬೇಕಾದರೆ ಆಧ್ಯಾತ್ಮಿಕತೆಯ ಹದ ಮಾಡಿಕೊಳ್ಳಬೇಕೆಂದು ಮನವಿ ಮಾಡಿಕೊಳ್ಳುವರು. ಸನ್ಯಾಸವನ್ನು ಕುರಿತ ಅಧ್ಯಾಯದಲ್ಲಿ ವಳ್ಳುವರು ಹೇಳುವುದಿದು :

ಯಾವ ಯಾವ ವಸ್ತುಗಳನ್ನು ತೊರೆದು ಬಿಟ್ಟವನು
ಅದರದರಿಂದ ನೋಯುವುದರಿಂದ ಮುಕ್ತನಾಗುವನು (341)

ಅತ್ಯಂತ ರಸವತ್ತಾಗಿ ವ್ಯಕ್ತಪಡಿಸಿರುವ ಗಹನವಾದ ಚಿಂತೆಯಿದು. ಒಬ್ಬ ವ್ಯಕ್ತಿಯು ತನ್ನ ಮೋಟಾರು ಕಾರನ್ನು ವರ್ಜಿಸಿದರೆ ಅದರಿಂದ ಉಂಟಾಗುವ ತೊಂದರೆ ಮತ್ತು ವೆಚ್ಚಗಳಿಂದ ಮುಕ್ತನಾಗುತ್ತಾನೆ. ಮನೆಯಲ್ಲಿರುವ ಅಡಿಗೆಯವನನ್ನು ಕಳಿಸಿಬಿಟ್ಟರೆ ಆ ಅಡಿಗೆಯವನಿಂದ ಅವನಿಗೆ ಆಗುತ್ತಿದ್ದ ಬಾಧೆಗೆ ಎಂದೆಂದಿಗೂ ಗುರಿಯಾಗುವ ಸಂಕಟವಿರುವುದಿಲ್ಲ. ಇದರಿಂದ ವ್ಯಕ್ತವಾಗುವುದೇನೆಂದರೆ ಯಾವ ವಸ್ತುವನ್ನೇ ಆಗಲಿ ತ್ಯಜಿಸುವುದರಿಂದ ಆ ವಸ್ತುವಿನಿಂದಾಗುವ ಬಾಧೆ ಮತ್ತು ಕಿರುಕುಳದಿಂದ ಬಿಡುಗಡೆ ದೊರೆಯುತ್ತದೆ. ಈ ಕುರುಳು ನಮಗೆ ಸಾಕ್ರಟೀಸನ ಸರಳ ಜೀವನವನ್ನು ನೆನಪಿಗೆ ತರುತ್ತದೆ. ಸಾಕ್ರಟೀಸನು ವರ್ಷವೆಲ್ಲ ಒಂದೇ ಒಂದು ನಿರಾಡಂಬರವಾದ ಕೊಳಕು ನಿಲುವಂಗಿಯಿಂದಲೇ ತೃಪ್ತಿಪಟ್ಟುಕೊಳ್ಳುತ್ತಿದ್ದನು. ಕಾಲಿಗೆ ಚಪ್ಪಲಿ ಅಥವಾ ಶೂಗಳನ್ನು ಹಾಕಿಕೊಳ್ಳುವುದಕ್ಕಿಂತಲೂ ಬರಿಗಾಲಲ್ಲಿಯೇ ಇರಲು ಇಷ್ಟಪಡುತ್ತಿದ್ದನು. ಮಾನವ ಸಮುದಾಯವನ್ನು ಗೊಂದಲಕ್ಕೀಡು ಮಾಡುವ ಒಡೆತನದ ಜ್ವರದಿಂದ ಅವನು ಸ್ವತಃ ಮುಕ್ತನಾಗಿದ್ದನು. ನಗರದ ಪೇಟೆಯಂಗಡಿಗಳಲ್ಲಿ ಮಾರಾಟಕ್ಕೆ ಪ್ರದರ್ಶಿಸಿದ್ದ ಹೇರಳ ಸಾಮಗ್ರಿಗಳ ರಾಶಿಯನ್ನು ಕಂಡು ಅವನು "ಈ ಜಗತ್ತಿನಲ್ಲಿ ನನಗೆ ಬೇಡವಾದ ವಸ್ತುಗಳು ಎಷ್ಟೊಂದಿವೆ !"

ಎಂದು ಪ್ರತಿಕ್ರಿಯೆ ವ್ಯಕ್ತಪಡಿಸಿದ್ದನು. ವಾಸ್ತವಿಕವಾಗಿ ಅವನು ತಾನಾಗಿಯೇ ವಿಧಿಸಿಕೊಂಡಿದ್ದ ಬಡತನದಿಂದ ತಾನು ಅಪಾರ ಶ್ರೀಮಂತನಾಗಿದ್ದೇನೆಂದು ಭಾವಿಸಿದ್ದನು.

ತ್ಯಾಗವು ಮಾನವು ಈ ಲೋಕದಲ್ಲಿಯೇ ಆನಂದಪಡುವ ಶಕ್ತಿಯನ್ನು ನೀಡುವುದಂ ಮತ್ತು ಜೀವನವನ್ನು ವೈಭವದಿಂದ ಮೆರೆಸುತ್ತದೆಯೆಂದು ವಳ್ಳುವರು 342ನೆಯ ಕುರಳಿನಲ್ಲಿ ಹೇಳಿರುತ್ತಾರೆ.

ತಾನು ತನದೆಂಬ ಮಮಕಾರವನು ಹರಿದುಕೊಂಡವನು
ದೇವತೆಗಳಿಗೂ ಎಟುಕದ ಮೇಲು ಲೋಕವ ಸೇರುವನು (346)

ಬಂಧನವ ಸಡಿಲಿಸಿ ದೂರವಿರದವನಿಗೆ
ದುಃಖಗಳು ಬಿಡದೆ ಬಂದಂಟಿಕೊಳ್ಳುವುವು (347)

350ನೆಯ ಕುರಳಿನಲ್ಲಿ ಸಂತ ವಳ್ಳುವರು ಸಾರುತ್ತಾರೆ:

ಬಂಧನವ ಹರಿದ ಮಹಾಮಹಿಮನನು ಬಿಡದಪ್ಪಿ
ಶರಣಾದೊಡೆ ಲೋಕ ಬಂಧನವು ತಾನಾಗಿಯೆ ಹರಿವುದು (350)

ಅನಂತರ, ವಿರಾಗಿಯಾದವನು ಅಂತಿಮವಾದ ಪರತತ್ವವನ್ನು ಕಂಡುಕೊಳ್ಳಬೇಕೆಂದು ವಳ್ಳುವರು ಕರೆಕೊಡುತ್ತಾರೆ:

ಲೋಕದ ಮರುಳು ನೀಗಿ ನಿಚ್ಚಳದ ಕಾಣ್ಕೆಯುಳ್ಳವರಿಗೆ
ಇರುಳು ನೀಗಿ ಇನಿಯ ಸುಖವು ಫಲಿಸುವುದು (352)

ಸಂದೇಹಗಳ ತೊರೆದು ನಿರ್ಮಲ ನಿಜತತ್ವವನು ತಿಳಿದವಗೆ
ಇಳೆಗಿಂತ ಸ್ವರ್ಗವೆ ಸನಿಹಕೆ ನಿಲುವುದು (353)

ವಳ್ಳುವರ ಮೇರೆಗೆ, ಅಂತಿಮ ಪರತತ್ವದ ಜ್ಞಾನವನ್ನು ಸಾಧಿಸಿರುವವರ ಹೊರತಾಗಿ ಪಂಚೇಂದ್ರಿಯಗಳ ಮೂಲಕ ಪಡೆದ ಜ್ಞಾನವೂ ಸಫಲವೆನ್ನಿಸುತ್ತದೆ.

ಇಹದಲ್ಲಿ ಕಲಿತು ನಿಜದ ಹುರುಳನ್ನು ಕಂಡವರು
ಗ್ರಹಿಸುವರು ಮರುಹುಟ್ಟಿಲ್ಲದ ನೆಲೆಯನು (357)

ಕಾಮ, ಕ್ರೋಧ ಮರುಳುತನ-ಇವು ಮೂರರ ಹೆಸರು
ಅಳಿಸಿದರೆ ದುಃಖವೂ ಅಳಿಸಿ ಹೋಗುವುದು (360)

ಮುಂದಿನ ಅಧ್ಯಾಯದಲ್ಲಿ ಈ ಪೂಜ್ಯರು ವಿರಾಗಿಯಾದವನು ಆಸೆಯನ್ನು ಬೇರುಸಹಿತ ಕಿತ್ತೊಗೆಯಬೇಕೆಂದು ಹೇಳುತ್ತಾರೆ.

ದುಃಖದೊಳು ಕಡು ದುಃಖವೆನಿಪ ಆಶೆಯನು, ಕಡಿದು
ಕೊಂಡರೆ ನಿರಂತರ ಸುಖವು ಇಲ್ಲಿ ದೊರೆಯುಂವುದು (369)

ರಾಜಕೀಯವಾಗಿ, ಆರ್ಥಿಕವಾಗಿ ಅಥವಾ ಸಾಮಾಜಿಕವಾಗಿ ಸ್ವತಂತ್ರರಾದುದರಿಂದಲೇ ತಾವು ಪೂರ್ಣ ಮುಕ್ತರು ಎಂದು ಹಲವರು ಭಾವಿಸುತ್ತಾರೆ. ವಾಸ್ತವಿಕವಾಗಿ ಪರಿಶೀಲಿಸಿದರೆ ಈ ಎಲ್ಲ ಸ್ವಾತಂತ್ರ್ಯಗಳಿದ್ದರೂ ಅವರು ತಮ್ಮ ಮನಃಪ್ರಚೋದನೆಗಳಿಗೆ ಬಲಿಯಾಗಿರುತ್ತಾರೆ ಮತ್ತು ಅವರು ಸ್ವಪ್ನಾವಸ್ಥೆಯಲ್ಲಿ ಚಲಿಸುವವರಿಗಿಂತ ಹೆಚ್ಚಿನ ಸ್ವಾತಂತ್ರ್ಯವನ್ನು ಪಡೆದಿರುವುದಿಲ್ಲವೆಂದು ವಳ್ಳುವರ ಅಭಿಪ್ರಾಯ.

ಆಸೆಯನು ಹರಿದು ಕೊಳ್ವವರೆ ಪಾಶದಿಂ ಮುಕ್ತಿ ಪಡೆದವರು
ಉಳಿದವರು ವಾಸ್ತವದಿ ಮುಕ್ತರೆನಿಸುವುದಿಲ್ಲ (365)

ಒಬ್ಬ ವ್ಯಕ್ತಿ ನಿಜವಾದ ಆಧ್ಯಾತ್ಮಿಕ ಮುಕ್ತಿಯನ್ನು ಸಾಧಿಸಿಕೊಂಡು ಪರತತ್ವವನ್ನು ತಿಳಿದು ಆದರ್ಶ ವಿರಾಗಿಯೆನ್ನಿಸಿದ ಮೇಲೆ ವಳ್ಳುವರು ಅವನೊಬ್ಬ ಸಮಾಜದ ಸದಸ್ಯನಾಗಿ, ರಾಷ್ಟ್ರದ ಪ್ರಜೆಯಾಗಿ ಮಹತ್ತರ ಪಾತ್ರವನ್ನು ಅವನಿಂದ ನಿರೀಕ್ಷಿಸುತ್ತಾರೆ.

ಧರ್ಮಭಾಗವಾದ ಮೇಲೆ ಬರುವ ಅರ್ಥಭಾಗದ ಕೊನೆಯ ಹಂತದಲ್ಲಿ, ವಳ್ಳುವರು ಒಬ್ಬ ಯೋಗಿ ಅಥವಾ ಅತಿ ಮಾನವನ ಲಕ್ಷಣಗಳನ್ನು ವಿವರಿಸುತ್ತಾರೆ ಮತ್ತು ತ್ಯಾಗಿಯಾದವನಿಗೆ ಅದೇ ಆದರ್ಶವೆಂದು ಎತ್ತಿ ಹಿಡಿಯುತ್ತಾರೆ. ಬೇರೆ ಮಾತುಗಳಲ್ಲಿ ಹೇಳುವುದಾದರೆ ಆಶಾತ್ಯಾಗ, ಆತ್ಮಸಮರ್ಪಣ, ತಪೋದೀಕ್ಷೆ, ಪರತತ್ವಾನುಭವ ಇವೇ ಮುಂತಾದ ಗುಣಗಳು ವಳ್ಳುವರ ಮೇರೆಗೆ ಸ್ವತಃ ಗಮ್ಯವೆನಿಸುವುದಿಲ್ಲ. ಆದರೆ ವ್ಯಕ್ತಿಯೊಬ್ಬನು ಸಜ್ಜನನಾಗಲು ತಕ್ಕ ಲಕ್ಷಣಗಳಾಗಿವೆ ಮತ್ತು ಆ ಮೂಲಕ ಅವನು ಸಮಾಜಸೇವೆಯನ್ನು ಉತ್ತಮವಾಗಿ ಮಾಡಬಲ್ಲವನಾಗುತ್ತಾನೆ. ಯೋಗಿಯಾದವನು ಬದುಕಿನಿಂದ ವಿಮುಖನಾಗುವುದಾಗಲಿ, ತನ್ನ ಲೌಕಿಕ ಕರ್ತವ್ಯಗಳನ್ನು ಮರೆತು ಬಿಡುವುದಾಗಲಿ ಸಲ್ಲದು ಎಂಬುದನ್ನು ಇಲ್ಲಿ ಸ್ಪಷ್ಟವಾಗಿ ತಿಳಿಯಬೇಕು. ಆದರೆ ಆತನು ತನ್ನ ಅಹಂಕಾರವನ್ನು ನಿರ್ಮೂಲ ಮಾಡಿರುತ್ತಾನೆ, ತನ್ನ ಆತ್ಮವನ್ನು ಕಂಡುಕೊಂಡಿರುತ್ತಾನೆ, ಅಂತರಂಗ ಸಾಮರಸ್ಯವನ್ನು ಸಾಧಿಸಿರುತ್ತಾನೆ. ಆದ್ದರಿಂದ, ಆಧ್ಯಾತ್ಮಿಕವಾಗಿ, ಸ್ವಾಭಾವಿಕವಾಗಿ ಮತ್ತು ಸ್ವಪ್ರೇರಣೆಯಿಂದ ಸಂಕಟದಲ್ಲಿರುವವರಿಗೆ ನೆರವನ್ನು ನೀಡಲೂ ಮಾನವರಲ್ಲಿ ಶಾಂತಿ ಮತ್ತು ಸಂತೋಷಗಳನ್ನು ಪ್ರಸರಿಸಲೂ ಇಹಲೋಕದ ಅಸ್ತಿತ್ವ ಮತ್ತು ಬದುಕಿನ ದೃಢ ನಿರ್ಧಾರಗಳ ತಳಹದಿಯ ಮೇಲೆ ಸಮಗ್ರ ಜೀವನವನ್ನೇ ವಿಜೃಂಭಿ

ಸಲೂ ಅವನು ಅರ್ಹನಾಗಿರುತ್ತಾನೆ. ಗೃಹಸ್ಥನಾದವನು ತ್ಯಾಗಿಯಾಗಿ, ತ್ಯಾಗಿಯಾದವನು ಯೋಗಿ ಇಲ್ಲವೇ ಅತಿ ಮಾನವನಾಗಿ ಕ್ರಮಿಸುವುದರ ಮೂಲಕ ಮಾನವನ ವಿಕಾಸ ನಿಶ್ಚಯ ಇಲ್ಲವೇ ನಿರ್ಧಾರಿತವಾದುದೆಂದು ವಳ್ಳುವರ ಅಭಿಮತ. ಎಲ್ಲ ಜೀವಿಗಳೊಡನೆ ತಾನೂ ಒಬ್ಬನಾಗಿರುವೆನೆಂಬ ಅರಿವು ಮೂಡಿದ ಮೇಲೆ ಯೋಗಿ ಇಲ್ಲವೇ ಅತಿ ಮಾನವನ ಕರ್ತವ್ಯಗಳಲ್ಲಿ ಹೊಣೆಗಳೂ ಅತ್ಯಧಿಕವಾಗಿ ಹೆಚ್ಚುತ್ತವೆ. ಅರ್ಧಭಾಗದ ಕೊನೆಯ ಅಧ್ಯಾಯದಲ್ಲಿ ತಿರುವಳ್ಳುವರು ಸದ್ಭಾವನೆ ಅಥವಾ (ಶಾನ್ರಾರ್ಣ್ಯ) ಜ್ಞಾನಿಯ ಲಕ್ಷಣವನ್ನು ಕುರಿತು ಹೀಗೆ ಹೇಳುತ್ತಾರೆ:

ಕರ್ತವ್ಯಗಳನರಿತು ಸದ್ಭಾವನೆಯಿಂದ ನಡೆದವರಿಗೆ
ಒಳಿತೆಲ್ಲವೂ ಸಹಜಕ್ರಿಯೆಯಾಗಿ ತೋರುವುದು (981)

ಅತಿ ಮಾನವನ ಪ್ರಜ್ಞಾಸ್ಥಿತಿಯನ್ನು ಮುಟ್ಟಿದ ಬಳಿಕ ಕೇಡಿಗೆ ಪ್ರತಿಯಾಗಿ ಒಳ್ಳೆಯದನ್ನೇ ಮಾಡುವುದು ಅವನಿಗೆ ಉಸಿರಾಡುವಷ್ಟೇ ಸಹಜಕ್ರಿಯೆಯಾಗಿ ತೋರುವುದು. ಆದ್ದರಿಂದ ತಿರುವಳ್ಳುವರು ಕೇಳುತ್ತಾರೆ:

ಕೇಡೆಣಿಸಿದವಗೆ ಹಿತವನೆಣಿಸದಿರೆ, ಸದ್ಭಾವನೆಯ
ಹುರುಳಿಗರ್ಥವೇನಿಹುದು? (984)

ಯಾರು ಅಹಂಕಾರವನ್ನು ನಿರ್ಮೂಲ ಮಾಡಿರುವರೋ ಯಾರು ಯಾವ ಮುಸುಕೂ ಇಲ್ಲದೆ ಪರತತ್ವದ ದಿವ್ಯದರ್ಶನವನ್ನು ಪಡೆದುಕೊಂಡಿರುವರೋ ಯಾರು ಅವಿಚ್ಛಿನ್ನ ಆನಂದದಲ್ಲಿರುವರೋ ಯಾರು ಸಹ ಮಾನವರ ಬಗ್ಗೆ ಪೂರ್ಣ ಸಹಾನುಭೂತಿಯುಳ್ಳವರೋ ಯಾರು ಭೂಮಿಯ ಮೇಲೆ ದುಃಖಿತಪ್ತವಾಗಿರುವ ಎಲ್ಲ ಜೀವಿಗಳ ಬಗ್ಗೆಯೂ ಗಾಢವಾದ ಚಿಂತನೆಯುಳ್ಳವರೋ ಯಾರು ಜಾತಿ, ಮತ, ವರ್ಗ ಅಥವಾ ದೇಶಗಳೆಂಬ ಯಾವ ಮಿತಿಗಳೂ ಇಲ್ಲದೆ ದುಃಖಿತರಾಗಿರುವವರಿಗೆ ನೆರವು ನೀಡಲು ಮುನ್ನುಗ್ಗುವರೋ ಮತ್ತು ಆ ಮೂಲಕ ವಿಶ್ವಪ್ರೇಮವನ್ನು ಆಚರಿಸುವರೋ ಅಂಥ ಸಜ್ಜನನನ್ನು ತಿರುವಳ್ಳುವರು ಒಬ್ಬ ಯೋಗಿಯೆಂದು ಭಾವಿಸುವರು. 2000 ವರ್ಷಗಳ ಹಿಂದೆಯೇ ತಿರುವಳ್ಳುವರಿಂದ ಪ್ರವರ್ಧಮಾನಗೊಂಡ ಈ ಭಾವನೆ ಅಸದೃಶವಾಗಿ ಆಹ್ಲಾದಕಾರಿಯಾಗಿದೆ ಮತ್ತು ಆಶ್ಚರ್ಯಕರವಾಗಿ ಆಧುನಿಕವೂ ಆಗಿದೆ.

ತಿರುಕ್ಕುರಳಿನ ಈ ವಿಹಂಗಮಾವಲೋಕನದಿಂದ ವಳ್ಳುವರು ಭಾಗಶಃವಾದುದನ್ನು ಪ್ರತ್ಯೇಕವಾಗಿ ಪರಿಶೀಲಿಸದೆ ಅಖಂಡವಾದ ಬೆಳಕಿನಲ್ಲಿ ನೋಡುವ ಮತ್ತು ವ್ಯಕ್ತಿಯ ವಿಕಾಸದ ಗತಿಯನ್ನು ಪ್ರವರ್ಧಿಸಬಹುದಾದ ವಿಧಾನಗಳನ್ನು ಸೂಚಿಸುವ ಬುದ್ಧಿಶಕ್ತಿಯನ್ನು ಪಡೆದಿದ್ದರೆನ್ನುವುದು ವ್ಯಕ್ತವಾಗುತ್ತದೆ. ಮುಂದಿನ ಪೀಳಿಗೆಗೆ ಅವರು ಬಿಟ್ಟು ಹೋಗಿರುವ ನೀಲಿನಕ್ಷೆಯು, ಪ್ರಖರವೂ, ಸವಿರಣಾತ್ಮಕವೂ ಆದ ಭಾವನೆಯಿಂದ ಕೂಡಿದೆ.



# 12 ವಿಶ್ವಮಾನವತೆಯ ಕವಿ

ಮೈಲಾಪುರದ ಈ ನೇಕಾರ ಅಖಂಡವಾದ ವಿಶ್ವದೃಷ್ಟಿಯನ್ನು ಪಡೆದಿದ್ದರು. ನಾವು ಅವರ ವರ್ಣರಂಜಿತ ಕುರಳುಗಳನ್ನು ಸಮಗ್ರತೆಯ ಬೆಳಕಿನಲ್ಲಿ ಅವಲೋಕಿಸಿದರೆ ಅವರು ನೇಯ್ದಿರುವ ಹಾಸಿನ ಮಾದರಿ ಕಂಡು ಬರುತ್ತದೆ.

ಅವರು ಮುಖ್ಯವಾಗಿ ಆಶಾವಾದಿ. ಅವರ ಸುತ್ತ ಮುತ್ತಲೂ ಇರುವ ಧರ್ಮಗಳೆಲ್ಲ ಜಗತ್ತಿನ ಅಸ್ತಿತ್ವದ ಬಗ್ಗೆ ಗಹನವಾದ ತಪ್ಪು ಕಲ್ಪನೆಗಳನ್ನು ಬೆಳೆಸಿ ಈ ಪ್ರಪಂಚದಿಂದ ಮಾನವನ ವಿಮೋಚನೆಯನ್ನು ಕುರಿತು ತಮ್ಮ ತಮ್ಮಲ್ಲಿಯೇ ಚಿಂತಿಸಲು ಪ್ರಾರಂಭಿಸಿದ ಕಾಲದಲ್ಲಿ ಪ್ರೇಮ ಮತ್ತು ಅನುಕಂಪೆಗಳ ಮೂಲಕ ಮಾನವನ ತೊಡರನ್ನು ಉತ್ತಮಪಡಿಸುವುದರಲ್ಲಿ ತಮ್ಮಷ್ಟಕ್ಕೆ ತಾವು ತೊಡಗಿದ್ದರು ಮಾಯಾವಾದಿಗಳು ಇತರರಿಗೆ ಬದುಕು ನಶ್ವರವೆಂದು ಬೋಧಿಸುತ್ತಿದ್ದಾಗ ವಳ್ಳುವರು ತಮ್ಮ ಶಕ್ತಿಯನ್ನೆಲ್ಲ ಬಳಸಿ 'ಬದುಕು ಸತ್ಯ' ಎಂದು ಸಾರಿದರು. ಅವರು ಇಹಲೋಕವನ್ನು ಕುರಿತಂತೆ ನಿಷ್ಕರ್ಮ ಮತ್ತು ನಿರಾಸಕ್ತಿಗಳನ್ನು ವಿರೋಧಿಸಿ "ಕರ್ಮಮಾಡದಿರುವುದಕ್ಕಿಂತ ದುಷ್ಕರ್ಮವೇ ಮೇಲು" ಎಂದು ಘೋಷಿಸಿದರು. ಅವರು ಹಾಗೆ ಹೇಳಲು ಕಾರಣವಿದೆ; ದುಷ್ಕರ್ಮಗಳನ್ನು ಮಾಡುವವನು ಬದುಕಿನ ವಾಸ್ತವಿಕತೆಯ ಸಂಪರ್ಕವನ್ನಾದರೂ ಹೊಂದಿರುವುದರಿಂದ ಅವನು ತನ್ನನ್ನು ತಾನು ತಿದ್ದಿಕೊಳ್ಳುವ ಸಂಭವವಿರುತ್ತದೆ. ಆದರೆ ಬದುಕಿನ ಕರ್ಮದಲ್ಲಿ ನಂಬಿಕೆ ಇಲ್ಲದಿರುವವನಲ್ಲಿ ಈ ಸಾಧ್ಯತೆಯೂ ಇರುವುದಿಲ್ಲ.

ಅವರು, ಮನುಷ್ಯನು ಆಂತರಂಗಿಕವಾಗಿ ಪರಿಪೂರ್ಣತೆಯನ್ನು ಸಾಧಿಸುವುದಲ್ಲದೆ ಇತರರಿಗೆ ನಿಸ್ವಾರ್ಥ ಸೇವೆ ಸಲ್ಲಿಸುವ ರೂಪದಲ್ಲಿ ಬಾಹ್ಯವಾಗಿಯೂ ಕ್ರಿಯಾಶೀಲನಾಗಿರಬೇಕೆನ್ನುವುದನ್ನು ಅಪೇಕ್ಷಿಸುತ್ತಾರೆ.

ಈ ಜಗತ್ತು ಮತ್ತು ಬದುಕನ್ನು ಸತ್ಯವನ್ನು ನಂಬುವ ಜನರು ಸಾಮಾನ್ಯವಾಗಿ ಪ್ರಾಪಂಚಿಕ ವಿಷಯುಗಳಲ್ಲಿ ಮಗ್ನರಾಗಿ ತಮ್ಮ ಆತ್ಮೋದ್ಧಾರದ ಬಗ್ಗೆ ಅಲಕ್ಷ್ಯದಿಂದಿರುತ್ತಾರೆ. ಅದಕ್ಕೆ ವ್ಯತಿರಿಕ್ತವಾಗಿ ಜಗತ್ತು-ಜೀವನ ನಶ್ವರವೆಂದು ತಿಳಿಯುವವರು ತಮ್ಮ ಆತ್ಮಕಲ್ಯಾಣವನ್ನೇ ಮುಂದಿಟ್ಟುಕೊಂಡು ಪ್ರಾಪಂಚಿಕ ಕ್ರಿಯೆಗಳನ್ನು ತಿರಸ್ಕಾರದಿಂದ ನೋಡುತ್ತಾರೆ. ವಾಸ್ತವಿಕವಾಗಿ ಭಗವದ್ಗೀತೆಯು "ಕರ್ಮದಲ್ಲಿ ಅನಾಸಕ್ತಿಯಿಂದಿರು" ಎಂದು ಹೇಳಿದರೆ, ಈ ಜಗತ್ತು-ಜೀವನಗಳನ್ನು ನಿರಾಕರಿಸುವವರು ಪ್ರಾಪಂಚಿಕ ಕ್ರಿಯಾದಿಗಳಲ್ಲಿಯೂ ಅನಾಸಕ್ತಿ ತಳೆದುಬಿಟ್ಟರು.

ತದ್ವಿರುದ್ಧವಾಗಿ, ಕುರಳ್, ಈ ಎರಡು ವಿಚಾರ ಪಂಥಗಳಿಗೂ ನಡುವಣ ಸುವರ್ಣ ಮಾಧ್ಯಮವೊಂದನ್ನು ಕಂಡು ಹಿಡಿದು ಆಂತರಿಕ ಮುಕ್ತಿಯಷ್ಟೇ ಮುಖ್ಯವಾಗಿ ಬಾಹ್ಯಕರ್ಮನಿರತೆಯನ್ನೂ ಪ್ರತಿಪಾದಿಸುತ್ತದೆ.

ಡಾ. ಆಲ್ಬರ್ಟ್ ಷ್ವೈಟ್ಜರ್ ತಮ್ಮ "ಭಾರತೀಯ ಚಿಂತನೆ ಮತ್ತು ಅದರ ಬೆಳವಣಿಗೆ" (Indian Thought and its Development) ಎಂಬ ಗ್ರಂಥದ 16 ನೆಯ ಪುಟದಲ್ಲಿ ಹೀಗೆ ಹೇಳುತ್ತಾರೆ: "ಈ ಸ್ವಾಭಾವಿಕ ಜಗತ್ತಿನಲ್ಲಿ ಇರುವತನಕ ದೇವರ ರಾಜ್ಯವನ್ನು ಸಾಕ್ಷಾತ್ಕಾರ ಮಾಡಿಕೊಳ್ಳುವುದು ಸಾಧ್ಯವಿಲ್ಲವೆಂದು ಏಸುವು ಭಾವಿಸುವುದರಿಂದ ಪ್ರಾಪಂಚಿಕ ಬದುಕಿನ ನಿರಾಕರಣೆಯು ಏಸುವಿನ ಚಿಂತನೆಯಲ್ಲಿ ಕಾಣಿಸಿಕೊಂಡಿದೆ. ಈ ಲೌಕಿಕ ಪ್ರಪಂಚವು ಅತಿ ಶೀಘ್ರವಾಗಿ ಕೊನೆಗೊಂಡು ಅಲೌಕಿಕ ಪ್ರಪಂಚವು ಬಂದು ಆಕ್ರಮಿಸಿಕೊಳ್ಳುವುದೆಂದು ನಿರೀಕ್ಷಿಸಿದ್ದನು." ಆದರೆ ಅದಕ್ಕೆ ಪ್ರತಿಯಾಗಿ ವಳ್ಳುವರು ಈ ಇಹಲೋಕದಲ್ಲಿಯೇ ಮುಕ್ತಮಾನವನು (ಜೀವನ್ಮುಕ್ತನು) ತನ್ನ ಸ್ವರ್ಗವನ್ನು ಸೃಷ್ಟಿಸಿಕೊಳ್ಳಬಹುದೆಂದು ನಂಬಿದ್ದನು. ವ್ಯಕ್ತಿಯು ಇಹಲೋಕದಲ್ಲಿಯೇ ಪರಿಪೂರ್ಣ ಆನಂದವನ್ನು ಪಡೆಯಬಹುದು ಮತ್ತು ಆತ್ಮಪರಿವರ್ತನೆಯ ಸಲುವಾಗಿ ಪ್ರಪಂಚವೇ ಪರಿವರ್ತನೆಯಾಗುವ ತನಕ ಅನಂತ ಕಾಲ ಕಾಯುವುದು ಅನಗತ್ಯವೆಂದು ಹೇಳಿದರು. ಈ ರೀತಿ ಜೀವನ ಮತ್ತು ಜಗತ್ತುಗಳೆರಡನ್ನೂ ಸತ್ಯವೆಂದು ಗ್ರಹಿಸಿದ ಅವರು ಕ್ರಿಸ್ತನಿಗಿಂತಲೂ ಮಿಗಿಲಾಗಿ ಉನ್ನತ ನೆಲೆಗೆ ಕೊಂಡೊಯ್ದರು.

ಜೈನ ಮತ್ತು ಬೌದ್ಧ ದೃಷ್ಟಿಗಳಲ್ಲಿ, ವ್ಯಕ್ತಿಯು ಸ್ವತಃ ಪ್ರಪಂಚದಿಂದ ಕಲುಷಿತವಾಗದಿರಲೆಂಬ ಕಾತರದಿಂದ ಮೂಲತಃ ಅಹಿಂಸೆಯನ್ನು ಪ್ರತಿಪಾದಿಸಲಾಯಿತು. ವಾಸ್ತವಿಕವಾಗಿ ಆ ಮತಗಳಲ್ಲಿ ಅಹಿಂಸೆಯ ತತ್ವವು ನಿಷ್ಕ್ರಿಯೆಯ ನಿಯಮದಿಂದ ಮೊದಲಾಯಿತು. ವಳ್ಳುವರಲ್ಲಿಯಾದರೋ ನೈಜವಾದ ಪ್ರೇಮ ಮತ್ತು ಅನುಕಂಪಗಳ ಆಧಾರವನ್ನು ಅವಲಂಬಿಸಿ ಆ ಮೂಲಕ ಅಹಿಂಸೆಯನ್ನು ಸಮರ್ಥಿಸಲಾಯಿತು.

ತಿರುವಳ್ಳುವರು ವಿಶ್ವದ ವಿಚಾರಧಾರೆಗೆ ನೀಡಿದ ಇನ್ನೊಂದು ಕಾಣಿಕೆಯೂ ಇಷ್ಟೇ ಸ್ವೋಪಜ್ಞವಾದುದು. "ಯಾವುದು ಸದಾಶಯವುಳ್ಳುದೋ ಅದು ಸುಖದಾಯಕವಾದುದು, ಯಾವುದು ಸದಾಶಯ ಜನಕವೋ ಅದೇ ಸತ್ಯ" ಎಂದು ಹೇಳಿದರು. ಸತ್ಯವನ್ನು ಕುರಿತ ಈ ವ್ಯಾಖ್ಯೆ ತತ್ವಜ್ಞಾನದ ಇತಿಹಾಸದಲ್ಲಿಯೇ ಪ್ರಮುಖವಾದ ಘಟನೆ.

ತಿರುವಳ್ಳುವರು ನೀಡಿದ ಮತ್ತೊಂದು ಕೊಡುಗೆಯೆಂದರೆ ದೈವಕಲ್ಪನೆಯನ್ನು ನಾನಾ ಮತಗಳ ಜಾಲಗಳ ಸಿಕ್ಕಿನಿಂದ ಬಿಡುಗಡೆ ಮಾಡಿದ್ದು. 18ನೆಯ ಶತಮಾನದ

ಫ್ರಾನ್ಸಿನ ತತ್ವಜ್ಞಾನಿಯಾದ ಡಿಡೆರಾಟನು ಬೈಬಲಿನಿಂದ ವ್ಯಕ್ತವಾಗುವ ದೈವವನ್ನು ನಿರಾಕರಿಸಿ ವಿಜ್ಞಾನದ ಮೂಲಕ ವ್ಯಕ್ತವಾಗುವ ವಿಶ್ವಕ್ಕೆ ಸಮ್ಮತವಾದ ದೈವದ ಕಲ್ಪನೆಗೆ ಜಾಗೃತರಾಗಬೇಕೆಂದು ಕೇಳಿಕೊಂಡನು. "ದೇವರನ್ನು ಉದಾರ ಚಿತ್ತನನ್ನಾಗಿ ಮಾಡಿರಿ ಮತ್ತು ಬಂಧಮುಕ್ತನನ್ನಾಗಿ ಮಾಡಿರಿ" ಎಂದು ಅವನು ಆಣತಿಯಿತ್ತನು. ಸುಮಾರು ಎರಡು ಸಾವಿರ ವರ್ಷಗಳ ಮೊದಲೇ ತಿರುವಳ್ಳುವರು ದೇವರನ್ನು ಪರಿಶುದ್ಧವಾದ ಪ್ರೇಮ ಮಾತೃತ್ವದೊಂದಿಗೆ ಸಮೀಕರಿಸಿ ಆತನನ್ನು ಸರ್ವವ್ಯಾಪಕನನ್ನಾಗಿಯೂ ಮಾಡಿದ್ದರು. ವಾಸ್ತವಿಕವಾಗಿ ತಿರುವಳ್ಳುವರ ಆಧ್ಯಾತ್ಮಿಕ ಪೀಳಿಗೆಯವರಲ್ಲಿ ಒಬ್ಬನಾದ ತಿರುಮೂಲಾರ್ 3000 ಅಮರ ಗೀತಗಳಿರುವ ತಮಿಳಿನ "ತಿರುಮಂದಿರಂ" ಎಂಬ ಸಂಕಲನದಲ್ಲಿ ಈ ಪ್ರೇಮದ ತತ್ವವನ್ನು ವಿಶದವಾಗಿ ಪ್ರತಿಪಾದಿಸಿದ್ದಾನೆ. ತಮ್ಮ ಒಂದು ಹಾಡಿನಲ್ಲಿ ಹೇಳುತ್ತಾನೆ :

ಪ್ರೇಮ-ದೇವರು ಎರಡು ಬೇರೆ
ಎಂದೊರೆಯುವರು ಮೂರ್ಖರು
ಪ್ರೇಮ-ದೇವರು ಒಂದೆ ಎಂದು
ಗ್ರಹಿಸಲಾರದವರು
ಪ್ರೇಮ ದೇವರು ಒಂದೆ
ಎಂದವರರಿತ ಬಳಿಕ
ಪ್ರೇಮದಲೆ ನೆಲೆಗೊಳ್ಳುವರು
ದೇವರೆಂದು ಬಗೆದು

ಪಾಶ್ಚಾತ್ಯ ಮಾನವ ಮತ್ತು ಸಮಾಜದ ಬಗ್ಗೆ ಮುಖ್ಯವಾಗಿ ಚಿಂತಿಸುತ್ತ ಸೃಷ್ಟಿಕರ್ತನಾದ ದೇವರಿಗೂ ಮಾನವನಿಗೂ ಇರುವ ಸಂಬಂಧವನ್ನು ಅವರು ಕಡೆಗಣಿಸಿದರೆ, ನಮ್ಮ ಪ್ರಾಚೀನ ಚಿಂತನೆಯಲ್ಲಿ ಅದಕ್ಕೆ ವ್ಯತಿರಿಕ್ತವಾಗಿ. ಮಾನವ-ಮಾನವ ಸಂಬಂಧವನ್ನು ಕುರಿತು ಚಿಂತನೆ ಮಾಡುವುದಕ್ಕಿಂತ ಹೆಚ್ಚಾಗಿ ಮಾನವ-ದೇವರ ಸಂಬಂಧಕ್ಕೆ ಆದ್ಯತೆ ನೀಡಿರುವುದು ಕಂಡು ಬರುತ್ತದೆ. ವಳ್ಳುವರು ಈ ಎರಡು ಚಿಂತನ ಮಾರ್ಗಗಳಿಂದಲೂ ಶ್ರೇಷ್ಠವಾದುದನ್ನು ಗ್ರಹಿಸಿರುತ್ತಾರೆ. ತತ್ವಚಿಂತನೆಯ ಇತಿಹಾಸದಲ್ಲಿಯೇ ಮೊದಲಿಗೆ ಈ ಎರಡರ ಸಂಯೋಜನೆ 20ನೆಯ ಶತಮಾನದ ತತ್ವಜ್ಞಾನಿ ಹಾಗೂ ಮಾನವತಾವಾದಿಗಳಲ್ಲಿ ಒಬ್ಬರಾದ ಡಾ. ಆಲ್ಬರ್ಟ್ ಷ್ವೈಟ್ಜರ್ ತಮ್ಮ "ಭಾರತೀಯ ಚಿಂತನೆ ಮತ್ತು ಅದರ ಬೆಳವಣಿಗೆ" (Indian Thought and its Development) ಎಂಬ ಗ್ರಂಥದಲ್ಲಿ ಈ ಕಂಡಂತೆ ಹೇಳಿದ್ದಾರೆ :

"ಭಾರತದ ಜನಪ್ರಿಯ ನೀತಿ ತತ್ವಗಳಲ್ಲಿ ಕ್ರಿಯಾಶೀಲ ಅನೇಕ ಕಥೆಗಳಲ್ಲಿ. ಅದರಲ್ಲಿಯೂ ಮುಖ್ಯವಾಗಿ ಪ್ರಾಯಶಃ ಕ್ರಿ. ಶ. 2ನೆಯ ಶತಮಾನಕ್ಕೆ ಸೇರಿರಬಹುದಾದ 'ತಿರುಕ್ಕುರಳಿನ' ನೀತಿ ಸೂತ್ರಗಳಲ್ಲಿ ಕಾಣಿಸಿಕೊಂಡಿರುವುದನ್ನು ನಾವು ತಿಳಿಯುತ್ತೇವೆ."

"ಕುರಳಿಗೂ, ಅದಕ್ಕೆ ನಾಲ್ಕು ಶತಮಾನಗಳ ಮುಂಚೆಯೇ ಹುಟ್ಟಿಕೊಂಡ ಮನುಸ್ಮೃತಿಯ ನಿಯಮಾವಳಿಗೂ ಎಷ್ಟು ವ್ಯತ್ಯಾಸವಿದೆ ? ಎರಡನೆಯದರಲ್ಲಿ, ಬ್ರಾಹ್ಮಣ್ಯದ, ಆಧ್ಯಾತ್ಮಿಕ ಪ್ರಾಬಲ್ಯದಿಂದ ಜಗತ್ತು ಮತ್ತು ಜೀವನಗಳ ಅಸ್ತಿತ್ವದೊಂದಿಗೆ, ಜಗತ್ತು ಮತ್ತು ಜೀವನಗಳ ನಶ್ವರತೆಯನ್ನೂ ಜತೆ ಜತೆಯಾಗಿಯೇ ತಕ್ಕಮಟ್ಟಿಗೆ ಸಹಿಸಲಾಗುತ್ತದೆ. ಕುರಳಿನಲ್ಲಿ, ಜಗತ್ತು ಮತ್ತು ಜೀವನಗಳ ನಶ್ವರತೆಯಾದರೋ ಆಕಾಶದಲ್ಲಿ; ಕೇವಲ ಬಹುದೂರದಲ್ಲಿರುವ ಮೋಡದಂತೆ ಎಣಿಸಲಾಗುವುದು."

ಮನುಸ್ಮೃತಿಯಲ್ಲಿರುವಂತೆಯೇ ತಿರುಕ್ಕುರಳಿನ ನೀತಿ ತತ್ವಗಳಲ್ಲಿಯೂ ಪ್ರತಿಫಲದ ಭಾವನೆಗೇ ಒಂದು ಸ್ಥಾನವಿದೆ. ಧರ್ಮಮಾರ್ಗವನ್ನು ಉಪದೇಶಿಸುವ ಉದ್ದೇಶವೇನೆಂದರೆ ಅದು ಉತ್ತಮವಾದ ಪುನರ್ಜನ್ಮ ಇಲ್ಲವೇ ಮರುಹುಟ್ಟಿನಿಂದ ಮುಕ್ತಿಯುತ್ತ ಕರೆದೊಯ್ಯುತ್ತದೆ. ಇದರೊಂದಿಗೆ ಚೀನೀಯರ ನೀತಿಸಂಹಿತೆಗಳಲ್ಲಿ ಎದ್ದು ಕಾಣುವ ಸರಳ ಭಾವನೆಯೊಂದು ಕಂಡುಬರುತ್ತದೆ; ನೈತಿಕ ಆಚರಣೆಯಿಂದ ಐಹಿಕ ಸುಖವೂ ಅನೈತಿಕದಿಂದ ದುರದೃಷ್ಟವೂ ಲಭಿಸುತ್ತದೆಯೆನ್ನುವುದೇ ಅದು. ಇದ ಹೇಗಾದರೂ ಇರಲಿ ಕುರಳಿನ ನೀತಿ ತತ್ವಗಳ ಪ್ರತಿಫಲದ ಭಾವನೆಯು ವೈದಿಕಧರ್ಮ ಬೌದ್ಧಧರ್ಮ ಮತ್ತು ಭಗವದ್ಗೀತೆಗಳ ಪ್ರಭಾವಕ್ಕೆ ಪೂರ್ಣವಾಗಿ ಒಳಗಾಗಿಲ್ಲ. ಇಲ್ಲಿ ಸತ್ಕಾರ್ಯವನ್ನು ಕೇವಲ ಅದರ ಸಲುವಾಗಿಯೇ ಮಾಡಬೇಕೆಂಬ ಜ್ಞಾನವು ನಮಗೆ ಕಂಡುಬರುತ್ತದೆ. ಅನೇಕ ನೀತಿಸೂಕ್ತಿಗಳಲ್ಲಿ ಇದು ಪ್ರಕಾಶಿಸುತ್ತಿದೆ.

OO OO OO

"ಮೇಲು ಲೋಕವು ಇಲ್ಲವೆಂದು ಹೇಳಿದರೂ ದಾನ ಮಾಡುವುದು ಶ್ರೇಷ್ಠವೆಂದು ಕರೆಸಿಕೊಳ್ಳುತ್ತದೆ" (222). "ನಿಜವಾದ ಔದಾರ್ಯವು ಪ್ರತಿಫಲವನ್ನು ಅಪೇಕ್ಷಿಸುವುದಿಲ್ಲ. ಮಳೆಕೊಡುವ ಮೋಡಗಳಿಗೆ ಪ್ರತಿಯಾಗಿ ಲೋಕವು ಏನನ್ನು ತಾನೆ ಕೊಡಬಲ್ಲದು ? (211)"

OO OO OO

ಭಗವದ್ಗೀತೆಯು ವಿಶ್ವನಿಯಮಗಳಿಗನುಸಾರವಾಗಿ ಕರ್ಮ ಜೀವನದಲ್ಲಿ ತಟಸ್ಥವಾಗಿರಬೇಕೆಂದು ಒತ್ತಾಯಪೂರ್ವಕವಾಗಿ ಜೀವನೋದ್ದೇಶವೆಂದು ನಿರೂಪಿಸಿ

ದರೆ, ಕುರಳ್ ಎಷ್ಟು ಪ್ರಗತಿಪರವಾಗಿದೆ ! ಕರ್ಮ ಮತ್ತು ಫಲಗಳೆರಡೂ ಮನುಷ್ಯ ನನ್ನು ಒಳ್ಳೆಯ ಸ್ಥಾನದಲ್ಲಿರಿಸುತ್ತದೆ !

OO OO OO

ಭಗವದ್ಗೀತೆಯಲ್ಲಿ ಜಾತಿವಿಂಗಡಣೆಗನುಗುಣವಾಗಿ ಕರ್ಮವನ್ನು ವಿಧಾಯಕ ಮಾಡಿರುವಂತೆ ಕುರಳಿನಲ್ಲಿ ಸೀಮಿತಗೊಳಿಸದೆ ಸಾಮಾನ್ಯವಾಗಿ ಒಳ್ಳೆಯದಾಗಿರುವುದ ರಲ್ಲಿ ಅದು ಅಡಕವಾಗುತ್ತದೆ.

OO OO OO

ಭಾರತೀಯರಿಂದ ನಿರೀಕ್ಷಿಸಲಾಗದ ಕರ್ಮದಲ್ಲಿ ಸಂತೋಷವನ್ನು ಕಾಣುವ ಸೂಕ್ತಗಳಿರುವುದನ್ನು ಕಂಡರೆ ತೋರಿಬರುವ ಜಗತ್ತು ಮತ್ತು ಜೀವಗಳ ಅಸ್ತಿತ್ವದ ಸಾಮರ್ಥ್ಯಕ್ಕೆ ಸಾಕ್ಷಿಯಾಗಿದೆ.

OO OO OO

"ಬೌದ್ಧ ಧರ್ಮ ಹಾಗೂ ಭಗವದ್ಗೀತೆಗಳಲ್ಲಿರುವಂತೆ, ಕುರಳ್ ಕೂಡ ಈ ಪ್ರಪಂಚದಿಂದ ಆತ್ಮ ಮುಕ್ತಿಯನ್ನೂ ದ್ವೇಷ ರಹಿತವಾದ ಮನಸ್ಸನ್ನೂ ಪಡೆಯ ಬೇಕೆಂದು ಅಪೇಕ್ಷಿಸುತ್ತದೆ. ಅವುಗಳಂತೆಯೇ ಅಹಿಂಸೆ ಮತ್ತು ನಿರುಪದ್ರವ ವಿಧೇಯಕಗಳಿಗೆ ಬದ್ಧವಾಗಿದೆ. ಜಗತ್ತು ಮತ್ತು ಜೀವನಗಳ ನಶ್ವರತೆಯ, ಸಿದ್ಧಾಂತದ ಬೆಲೆಬಾಳುವ ನೈತಿಕ ಅಂಶಗಳನ್ನು ಕುರಳು ತನ್ನದಾಗಿ ಮಾಡಿಕೊಂಡಿದೆ. ಆದರೆ ಅಷ್ಟಕ್ಕೇ ನಿಲ್ಲದೆ ಈ ಅಂತರ್ಮುಖ ನೀತಿಯೊಡನೆ ಪ್ರೇಮದ ಜೀವಂತ ನೀತಿ ಯನ್ನು ಕುರಳಿನಲ್ಲಿ ಕಾಣಬಹುದಾಗಿದೆ"

"ಖಚಿತವಾದ ಪಂಕ್ತಿಗಳಲ್ಲಿ ಕುರಳ್ ಸರಳವಾದ ನೈತಿಕ ಮಾನವತೆಯ ಆದರ್ಶವನ್ನು ರೂಪಿಸುತ್ತದೆ. ಮನುಷ್ಯನು ತನ್ನ ಮಟ್ಟಿಗೆ ಮತ್ತು ಪ್ರಪಂಚವನ್ನು ಕುರಿತಂತೆ ಹೇಗೆ ನಡೆದುಕೊಳ್ಳಬೇಕೆಂಬ ಬಗ್ಗೆ ಉದ್ಭವಿಸಬಹುದಾದ ಅನೇಕ ಪ್ರಶ್ನೆ ಗಳಿಗೆ ಕುರಳಿನ ಉತ್ತರಗಳು ಗಾಂಭೀರ್ಯ ಮತ್ತು ಸದ್ಭಾವನೆಗಳಿಂದ ಕೂಡಿ ವಿಶಿಷ್ಟ ವಾಗಿವೆ. ಇಷ್ಟೊಂದು ಉನ್ನತವಾದ ವಿವೇಕವನ್ನು ಕಾಣಬಲ್ಲ ಸೂಕ್ತಿಗಳ ಸಂಗ್ರಹವು ವಿಶ್ವದ ಬೇರೆ ಯಾವ ಸಾಹಿತ್ಯದಲ್ಲಿಯೂ ಇರುವುದು ವಿರಳ."

"ಆದ್ದರಿಂದ ಆ ಬಗೆಯ ಸ್ವಾಭಾವಿಕವೂ ನೈತಿಕವೂ ಆದ ಜಗತ್ತು ಮತ್ತು ಜಗತ್ತಿನ ಅಸ್ತಿತ್ವವು ವೈದಿಕ ಧರ್ಮದಲ್ಲಾಗಲೀ ಬೌದ್ಧ ಧರ್ಮದಲ್ಲಾಗಲೀ ಭಗವದ್ಗೀತೆಯ ಹಿಂದೂ ಧರ್ಮದಲ್ಲಾಗಲೀ ಯಾವುದೇ ರೂಪದಲ್ಲಿ ಕಂಡು ಬಾರದಿ ದ್ದರೂ ನಮ್ಮ ಶಕದ ಪ್ರಾರಂಭದಲ್ಲಿ ಭಾರತದ ಜನರಲ್ಲಿ ಅದು ಇತ್ತು. ಅನಂತರ ಅದು ಕೆಳಮಟ್ಟದ ಜಾತಿಗಳಲ್ಲಿ ಹುಟ್ಟಿ, ಜನತೆಯ ಮಧ್ಯೆ ಬೆಳೆದು, ಅವರ ಸುಖ

ದುಃಖಗಳನ್ನು ಬಲ್ಲ ಹಿರಿಯ ಮತಾಚಾರ್ಯರುಗಳ ಮೂಲಕ ಹಿಂದೂ ತತ್ವ ಚಿಂತನೆಯನ್ನು ಕ್ರಮ ಕ್ರಮವಾಗಿ ಪ್ರವೇಶಿಸಿತು."

ಈ ರೀತಿ, ಡಾ. ಆಲ್ಬರ್ಟ್‌ಷ್ವೈಟ್ಜರ್ ಅವರು ತಿರುವಳ್ಳುವರನ್ನು ಭಾರತೀಯ ಚಿಂತನೆಯ ಉಚ್ಚಶಿಖರದಲ್ಲಿರಿಸಿದ್ದಾರೆ. ಶ್ರೀ ಅರವಿಂದರು "ಭಾರತೀಯ ಸಂಸ್ಕೃತಿಯ ಅಡಿಗಲ್ಲು" (Foundation of Indian Culture) ಎಂಬ ಗ್ರಂಥದ 358 ನೆಯ ಪುಟದಲ್ಲಿ ತಿರುಕ್ಕುರಳನ್ನು ಕುರಿತಂತೆ "ತಮಿಳು ಸಂತ ತಿರುವಳ್ಳುವರ ಸೂತ್ರಪ್ರಾಯವಾದ ಕಾವ್ಯ ಈ ತೆರನಾದ ರಚನೆಗಳಲ್ಲೆಲ್ಲ ಯೋಜನೆ, ಕಲ್ಪನೆ ಮತ್ತು ಪ್ರಭಾವ ಶಾಲಿಯಾದ ನಿರೂಪಣೆಯಲ್ಲಿ ಅತ್ಯಂತ ಬೃಹತ್ತಾದುದು"-ಎಂದು ಉಲ್ಲೇಖಿಸಿದ್ದಾರೆ.

ಇಷ್ಟೊಂದು ಶ್ಲಾಘನೆಗೊಳಗಾದ ವ್ಯಕ್ತಿಯು ಈ ಭೂಗ್ರಹದಲ್ಲಿ ನೆಲೆಸಿರುವಾಗ ಮನುಷ್ಯನನ್ನು ಕುರಿತು, ಮಾನವನ ಸ್ಥಿತಿಗತಿಗಳನ್ನು ಕುರಿತು ಆಲೋಚಿಸುತ್ತ ಮಾನವರ ಬದುಕನ್ನು ಎಷ್ಟರಮಟ್ಟಿಗೆ ಸಾರ್ಥಕವಾಗಿ ನಡೆಸಬಹುದೆನ್ನುವುದನ್ನು ಚಿಂತಿಸುತ್ತ ತನ್ನ ಜೀವನದ ಬಹುಪಾಲನ್ನು ಕಳೆದಿರಬೇಕು. ಅವರು ತಮ್ಮ ಭಾವನೆಗಳನ್ನು ಎಷ್ಟರಮಟ್ಟಿಗೆ ನಿರೂಪಿಸಿರುವರೆಂದರೆ ಅವುಗಳನ್ನು ದೈನಂದಿನ ಜೀವನದ ವಿವರಗಳಿಗೆ ಅನ್ವಯಿಸಬಹುದಾಗಿದೆ.

ಚರಿತ್ರೆಯ ಉಬ್ಬರವಿಳಿತಗಳ ನಡುವೆ, ಸ್ವೇಚ್ಛಾಚಾರದ ಯುಗದ ಬಳಿಕ ಕಟ್ಟುನಿಟ್ಟಾದ ನಿಯಮ ಪಾಲನೆಯ ಯುಗವು ಮೊದಲಾಗುತ್ತದೆ. ಕೆಟ್ಟ ನಡತೆಯನ್ನು ವಳ್ಳುವರು ತೀವ್ರವಾಗಿ ವಿರೋಧಿಸುವುದನ್ನು ನೋಡಿದರೆ, ಅವರು ಜೀವಿಸಿದ್ದ ಸಮಾಜದಲ್ಲಿ ವಿಷಯಲಂಪಟತ್ವ, ಬಡಾಯಿ ಮಾತು, ಹಿಂಸಾಚಾರ ಮತ್ತು ಕ್ಷುಲ್ಲಕ ವಿಷಯಗಳು ಮನೆ ಮಾಡಿದ್ದುವು ಎಂದು ಭಾವಿಸುವುದು ಅಷ್ಟೇನೂ ತಪ್ಪೆನ್ನಿಸುವುದಿಲ್ಲ. ಅದೇ ಸಮಯದಲ್ಲಿ ಸುಸಂಸ್ಕೃತವೂ, ಬಿಂಕಬಿನ್ನಾಣಗುಣಯುಕ್ತವೂ ಸುವ್ಯವಸ್ಥಿತವೂ ಆದ ಕಲಾಭಿಜ್ಞತೆ, ಮಿತವ್ಯಯಾಸಕ್ತಿ ಮತ್ತು ರಾಜಕೀಯ ಚಟುವಟಿಕೆಗಳಿಂದ ಸಮೃದ್ಧವೂ ಅಪಾರಚೇತನಪೂರ್ಣವೂ ಆದ ಬಹುಮುಖವುಳ್ಳ ಸಮಾಜದ ಚಿತ್ರಣವನ್ನೂ ವಳ್ಳುವರು ನೀಡಿರುವುದನ್ನು ಕಾಣಬಹುದು.

ಇಂಥ ಸಮಾಜವನ್ನು ಕುರಿತು ಪ್ರಸ್ತಾಪಿಸುವಾಗ ಮತ್ತು ಅದನ್ನು ಟೀಕಿಸುವಾಗ ವಳ್ಳುವರು ತಮ್ಮ ಅಸಾಧಾರಣ ಪ್ರಜ್ಞೆಯನ್ನು ವ್ಯಕ್ತಪಡಿಸುತ್ತಾರೆ. ಅಲ್ಲದೆ ಅವರು ವಿವೇಚನೆ ಮತ್ತು ತಿಳಿವಳಿಕೆಗಳನ್ನೂ ಸಂಪ್ರದಾಯ ನಿಷ್ಠೆ ಮತ್ತು ಮನೋರಂಜನೆಗಳನ್ನೂ ಅತ್ಯಂತ ನೈಪುಣ್ಯದಿಂದ ಮೇಳವಿಸಿಕೊಂಡಿರುವ ಸಂಗತಿಯೂ ವೇದ್ಯವಾಗುವುದು ಅವರ ಗಹನವಾದ ಅಭಿಪ್ರಾಯಗಳು ಹಿತಕರವಾಗಿ ಹಾಸ್ಯಪೂರ್ಣವಾಗಿದ್ದರೂ ಒಮ್ಮೊಮ್ಮೆ ಕಟುವಾದ ವಿಡಂಬನೆಯಿಂದ ಕ್ಷಾರವಾಗಿರುತ್ತಿದ್ದವು.

ಜೀವನದ ಯಾವುದೇ ಪ್ರಮುಖ ಸಮಸ್ಯೆಯನ್ನು ಕುರಿತು ವಳ್ಳುವರು ಹೇಳದೇ ಬಿಟ್ಟಿರುವುದು ಏನೂ ಇಲ್ಲ. ಅವರು ಹೇಳಿರುವುದನ್ನು ಗ್ರಹಿಸಿದ ಬಳಿಕ, ಒಟ್ಟಿನಲ್ಲಿ ಒಬ್ಬನ ಮನಸ್ಸಿನಲ್ಲಿ ಅಚ್ಚೊತ್ತಿ ಉಳಿಯುವ ಅಂಶವೆಂದರೆ, ವಳ್ಳುವರಿಗೆ ಒಬ್ಬ ವೀರಯೋಧನಿಗಿಂತ ಯೋಗಿಯಾದವನೆ ಆದರ್ಶ ಪುರುಷನೆನ್ನಿಸುತ್ತಾನೆ. ಅವರ ಆದರ್ಶ ಪುರುಷ (ಸಜ್ಜನ ಶಾನ್ರೋರ್) ಆಧ್ಯಾತ್ಮಿಕ ತತ್ವವನ್ನು ಕುರಿತು ಬೋಧಿಸುವುದು ಮಾತ್ರವಲ್ಲದೆ ಬದುಕಿನಲ್ಲಿ ಆಚರಿಸುತ್ತಲೂ ಇದ್ದರು. ದಯೆಯು ವಿಶ್ವದ ವಿವಿಧ ಭಾಗಗಳನ್ನು ಒಂದುಗೂಡಿಸುವ ಶಕ್ತಿಯೆಂದು ಅವರಿಗೆ ದೃಢವಾದ ವಿಶ್ವಾಸವಿತ್ತೆಂದೂ, ಪರಮೋಚ್ಚವಾದ ಸುಖವನ್ನು ಮಾತ್ರವೇ ಪಡೆಯುವು ದಾಗಲಿ, ಪರಿಪೂರ್ಣವಾದ ನೈತಿಕತೆಯು ಅಡಕವಾಗಿರುವುದಾಗಲಿ ಈ ಅಖಂಡತೆ ಹುಲ್ಲಿನ ಸಂವೇದನಾತ್ಮಕವಾದ ಶ್ರದ್ಧಾನುಗುಣವೆಂದೂ ಅವರ ಬರಹಗಳ ಮೂಲಕ ಅಚ್ಚಳಿಯದೆ ಉಳಿಯುವುದು.

ವಳ್ಳುವರಲ್ಲಿರುವ ಮಾಂತ್ರಿಕ ಶಕ್ತಿಯು ಅವರನ್ನು ಸತ್ಯಾನ್ವೇಷಣೆ ಮತ್ತು ಸೌಂದರ್ಯ ಸೃಷ್ಟಿಗಳೆರಡಕ್ಕೂ ವಿವೇಚನಾತ್ಮಕವಾಗಿ ತಮ್ಮನ್ನು ತಾವು ಅರ್ಪಿಸಿ ಕೊಳ್ಳುವಂತೆ ನೆರವಾಗುತ್ತದೆ. ಅವರು ಹೊಸತೊಂದು ತತ್ವದರ್ಶನವನ್ನು ಸ್ಥಾಪಿ ಸಿರುವುದು ಮಾತ್ರವಲ್ಲದೆ ಬೇರೆ ಯಾರೂ ಮೀರಿಸಲಾಗದಿರುವ ಶಿಲ್ಪಸಾಮರ್ಥ್ಯ ವುಳ್ಳ ಕವಿತೆಗಳಲ್ಲಿ ಅದಕ್ಕೆ ಅಭಿವ್ಯಕ್ತಿಯನ್ನೂ ಕೊಟ್ಟಿದ್ದಾರೆ. ಒಟ್ಟಿನಲ್ಲಿ ಕುರಳು ಗಳು ವಳ್ಳುವರ ಚಿಂತನೆಗಳ ಹೊರೆಯನ್ನು ತೇಲಿಬಿಡುವಷ್ಟು ಮಾತ್ರ ಹಗುರ ವಾಗಿವೆ.

ತಿರುವಳ್ಳುವರು ನುಡಿಗಟ್ಟುಗಳನ್ನು ನಿರ್ಮಿಸಿದರು ಮತ್ತು ಪದಾಭಿವ್ಯಕ್ತಿ ಗಳನ್ನು ಸೃಷ್ಟಿಸಿದರು. ಆ ಮೂಲಕ ಭಾಷೆ-ತತ್ವಜ್ಞಾನಗಳೆರಡೂ ಅವರಿಗೆ ಅಪಾರ ವಾಗಿ ಋಣಿಯಾಗಿವೆ. ಮಹತ್ವಾದ ವಿಷಯಗಳನ್ನು ಸಮಾಧಾನಪೂರ್ವಕ ವಾಗಿಯೂ, ಗಂಭೀರವಾಗಿಯೂ ಅವರು ಕ್ರೋಢೀಕರಿಸುವುದನ್ನು ಕಂಡರೆ ಅವರು ಜೀವನದ ಸಮಸ್ಯೆಗಳನ್ನು ಎಷ್ಟು ವಿಶ್ವಾಸಪೂರ್ವಕವಾಗಿಯೂ, ಸಮತೋಲನ ವಾಗಿಯೂ, ಪ್ರಸನ್ನವಾಗಿಯೂ ಎದುರಿಸಬಲ್ಲರೆನ್ನುವುದು ಪ್ರತಿಬಿಂಬಿತವಾಗುತ್ತದೆ. ಅವರ ಬರವಣಿಗೆಗಳನ್ನು ಅಸ್ಪಷ್ಟತೆ, ಸಂದಿಗ್ಧತೆ, ಕೃತಕತೆ, ಪೂರ್ವಪರಿವರ್ತನೆ ಅಥವಾ ಅನಿಶ್ಚಯತೆಗಳಾವುವೂ ಕವಿಯುವುದಿಲ್ಲ.

ಅವರ ಅಸಾಧಾರಣ ಪ್ರಬುದ್ಧತೆ, ಮತ್ತು ಮಾರ್ದವತೆಗಳಿಂದ ಹೊಮ್ಮಿ ಬಂದ ದ್ವಿಪದಿಗಳಾದ ಕುರಳುಗಳಲ್ಲಿ ಸತ್ವಯುತವಾದ ಅಂತರ್ಮುಖತೆಯೂ ಹುದುಗಿವೆ. ಆದ್ದರಿಂದ ಅವರು ಬಲಿತ ಮರದಂತೆ ತಮ್ಮ ವಿವೇಕಯುಕ್ತವಾದ ಹಣ್ಣುಗಳನ್ನು ಉದುರಿಸುತ್ತಾರೆ.

ಎಲ್ಲಕ್ಕಿಂತಲೂ ಮಿಗಿಲಾಗಿ ಅವರ ಅತ್ಯುನ್ನತವಾದ ಮತ್ತು ಪ್ರೀತಿಭರಿತವಾದ ಆತ್ಮೀಯತೆಯಿಂದ ಅವರ ದೃಷ್ಟಿ ವಿಶಾಲವೆನ್ನಿಸಿ ಜಾತಿ ಮತ ಅಥವಾ ರಾಷ್ಟ್ರಗಳೆಂಬ ಅಲ್ಪತನಗಳನ್ನು ಒಪ್ಪಲು ನಿರಾಕರಿಸುತ್ತದೆ. ಪ್ರಾಯಶಃ ತಿರುವಳ್ಳುವರ ಸಮಕಾಲೀನರಾಗಿರಬಹುದಾದ ಮತ್ತೊಬ್ಬ ತಮಿಳು ಕವಿ ಪೊನ್‌ಕುನ್ರನರ್ ಅವರೊಂದಿಗೆ ಹಂಚಿಕೊಂಡಂತೆ ಅವರು ಸರ್ವಸಮದರ್ಶಿಯಾಗಿದ್ದರು. ಪೊನ್‌ಕುನ್ರನರ್ ಇದೇ ರೀತಿಯ ಸರ್ವ ಸಮದರ್ಶಿತ್ವವನ್ನು ಈ ಕೆಳಗಿನ ಮಾತುಗಳಲ್ಲಿ ಸಾರಿದ್ದಾರೆ :

ಎಲ್ಲ ದೇಶವೂ ನನ್ನ ಊರೇ
ಯಾರೊಬ್ಬನೂ ನನ್ನ ಬಂಧು

ಬೃಹತ್ತಾದ ಸಾಹಿತ್ಯ ಸಾಮ್ರಾಜ್ಯದಲ್ಲಿ ವಳ್ಳುವರಿಗೆ ಹೆಗಲೆಣೆಯಾಗಿರುವವರು ವಿರಳ. ಜಿ. ಯು. ಪೋಪ್ ಅವರನ್ನು "ವಿಶ್ವಮಾನವತೆಯ ಕವಿ" ಎಂದು ಶ್ಲಾಘಿಸಿರುವುದು ಸಮಂಜಸವಾಗಿಯೇ ಇದೆ.



# ಗ್ರಂಥ ಸೂಚಿ


1. ದಿ ಕುರಲ್ ಆಫ್ ತಿರುವಳ್ಳುವರ್ : ಅನುವಾದ–ರೆವರೆಂಡ್ ಡಬ್ಲ್ಯೂ ಡ್ರ್ಯೂ .... 1840

2. ದಿ ಟಮಿಲ್ ಪ್ಲುಟಾರ್ಕ್ : ಲೇ: ಸೈಮನ್ ಕೇಸಿ ಚಿಟ್ಟಿ ... 1859

3. ದಿ ಸೇಕ್ರೆಡ್ ಕುರಳ್ ಆಫ್ ತಿರುವಳ್ಳುವ ನಾಯನಾರ್: ಲೇ: ರೆವರೆಂಡ್ ಜಿ. ಯು. ಪೋಪ್ - ಆಕ್ಸ್‌ಫರ್ಡ್ ಯುನಿವರ್ಸಿಟಿ ಪ್ರೆಸ್ .... 1886

4. ಲೆ ವಿವರೆ ಡಿಲೆ ಅಮೊರ್ ಡಿ ತಿರುವಳ್ಳುವ - ಫ್ರೆಂಚ್ ಅನುವಾದ: ಡಿ. ಬ್ಯಾಂಗ್ ಡಿ. ಫಾಂಟೆನೊ .... 1889

5. ದಿ ಮ್ಯಾಕ್ಸಿಮ್ಸ್ ಆಫ್ ತಿರುವಳ್ಳುವರ್ - ಲೇ: ವಿ. ವಿ. ಎಸ್. ಅಯ್ಯರ್ .... 1915

6. ವಳ್ಳುವಮ್ - ಡಾ. ವ. ಸುಬ್ರಮಣ್ಯಂ .... 1953

7. 'ವಳ್ಳುವರ್ ವಾಕ್ಕು' - 'ತಿರುವಳ್ಳುವರ್ ಕಳಗಂ' ನ ಬೆಳ್ಳಿಹಬ್ಬದ ನೆನಪಿನ ಸಂಪುಟ, ತೆಂಕಾಶಿ .... 1955

8. ತಿರುವಳ್ಳುವರ್ ವಾಳ್ಕೈ ವಿಳಕ್ಕುಮ್ ಲೇ: ಮು. ವರದರಾಜನ್ .... 1959

9. ತಿರುಕ್ಕುರಳ್ - ಇಂಗ್ಲಿಷ್ ಅನುವಾದ, ಟಿಪ್ಪಣಿ ಮತ್ತು ವ್ಯಾಖ್ಯಾನ - ಕೆ. ಎನ್. ಬಾಲಸುಬ್ರಮಣಿಯನ್ .... 1962

10. ಎ ಹಿಸ್ಟರಿ ಆಫ್ ತಮಿಳ್ ಲಿಟರೇಚರ್ ಲೇ: ಟಿ. ಪಿ. ಮೀನಾಕ್ಷಿ ಸುಂದರಮ್ .... 1965

11. ತಿರುಕ್ಕುರಳ್ ನೀತಿ ಇಲಕ್ಕಿಯಮ್
ಲೇ: ಕೆ. ಟಿ. ತಿರುನಾವುಕ್ಕರಸು .... 1971

12. ತಿರುಕ್ಕುರಳ್ ಕಪ್ಲೆಟ್ಸ್ ವಿತ್ ಕ್ಲಿಯರ್ ಪ್ರೋಸ್
ರೆಂಡರಿಂಗ್ ಲೇ: ಯೋಗಿ ಶುದ್ಧಾನಂದ ಭಾರತಿ ... 1971

13. 'ವಾಯ್ಸ್ ಆಫ್ ತಿರುವಳ್ಳುವರ್'
ಲೇ: ರಾವ್ ಸಾಹೇಬ್ ಎಸ್. ಆರ್. ಅರಸು ... 1972

14. ತಿರುಕ್ಕುರಳ್ ಪುದೈಪ್ಪೊರುಳ್
ಲೇ: ಕೆ. ಎ. ಪಿ. ವಿಶ್ವನಾಥನ್ .... 1974